# ಒಂದು ಮಾತು ಮೂರು ಗ್ರಂಥಗಳು




ಗ್ರಂಥಕರ್ತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (84) ದಶ ಅಷ್ಟಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು

www.thraithashakam.org





# ಒಂದು ಮಾತು
# ಮೂರು ಗ್ರಂಥಗಳು


ರಚಿತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (84) ದಶ ಅಷ್ಟಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ಗ್ರಂಥಕರ್ತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

---

ತೆಲುಗುನಿಂದ ಕನ್ನಡಕ್ಕೆ ಅನುವಾದ

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**

---






ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಡಿಸೆಂಬರ್ –2016

ಗಳು : 1000 **ಬೆಲೆ. 45/–**

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ-ಉತ್ತರಗಳು.
03. ಧರ್ಮ-ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ-ಅಸತ್ಯವಾ?)
06. ದೆವ್ವಗಳಹಾಗೂ-ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ-ಮಹಿಮೆ (ಸತ್ಯವಾ-ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ-ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ-ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ-ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು-963.
38. ಮತ-ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು-ಆಸ್ತಿಕರು.
44. ಹೇತುವಾದ-ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.
54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು-ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ - ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಹಿಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!
80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!
82. ವಿಶ್ವ ವಿದ್ಯಾಲಯ
83. ಕೃಷ್ಣ ಮೂಸ (ಶ್ರೀ ಕೃಷ್ಣ ಮರಣದ ನಂತರ ಜೀವನ)
84. ಒರೆಗಲ್ಲು (ಗೀಟುರಾಯಿ)
85. ಮೂರು ದೈವ ಗ್ರಂಥಗಳು-ಮೂರು ಪ್ರಥಮ ವಾಕ್ಯಗಳು
86. ಹೇತುವಾದ ಪ್ರಶ್ನೆಗಳು-ಸತ್ಯವಾದ ಉತ್ತರಗಳು
87. ದೈವಗ್ರಂಥಗಳಲ್ಲಿ ಸತ್ಯಾಸತ್ಯ ವಿಚಕ್ಷಣೆ
88. ನಿನಗೆ ನನ್ನ ಲೇಖ
89. ಹಿಂದೂ ಮತದಲ್ಲಿಯೇ ಕುಲವಿವಕ್ಷ
90. ದೇವರ ಮುದ್ರೆ
91. ಯೋಹಾನ ಸುವಾರ್ತೆ
92. ಧರ್ಮಚಕ್ರ



# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು– ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ಅದ್ವಿತೀಯುಡು.
39. ಎದಮೀದಮುದ್ರ–
    ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
    ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
    ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
    ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
    ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
    ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.
62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ –
    ದೇಹಂ ಮೋಹಂ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ–
ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು–
ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು–
ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು–
ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ
ಮಹೇಂದ್ರಜಾಲ,
ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ
(ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು–ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು–
ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಮಾಯ ಮರ್ಮಮು–ಆತ್ಮ ಧರ್ಮಮು
115. ಶ್ರೀಕೃಷ್ಣುಡು
ಚನಿಪೋಯಾಡಾ? ಚಂಪಬಡ್ಡಾಡಾ?
116. ಅಂತಿಮ ದೈವಗ್ರಂಥಮುಲೋ ಪ್ರಥಮವಾಕ್ಯಮುಲು
117. ಅದುರು–ಬೆದುರು
118. ಶವಮು – ಶಿವಮು
119. ಧರ್ಮಚಕ್ರಮು
120. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.



**ಸೂಚನೆ :** ತೆಲುಗಿನಿಂದ ಕನ್ನಡಕ್ಕೆ ಅನುವಾದಿಸಲಾಗದ ಪದಗಳು ಹಾಗೆಯೇ ಮುದ್ರಿಸಲಾಗಿದೆ.

# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P

Cell : **ಲಕ್ಷ್ಮಿನಾರಾಯಣಾಚಾರಿ**–09440556968. **ವೆಂಕಟೇಶ್**–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಹೊಸಪೇಟೆ, ಬಳ್ಳಾರಿ (ಜಿಲ್ಲೆ). K. A
Cell : 9611133635,
9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್,
ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು, ಚಿಕ್ಕಸೂಗುರು (ತಾ),
ರಾಯಚೂರು (ಜಿ), Cell:98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ಬೆಂಗಳೂರು–560085
Cell : 9036892829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಯೋಗೇಶ್**.B
ವಡ್ಡೇಪಾಲ್ಯಂ (ಗ್ರಾ),
ಕುಂದುರ್ಪಿ(ಮಂ),ಅನಂತಪುರ(ಜಿಲ್ಲಾ)
ಸೆಲ್: 9620193341, 9739228639

**ಬಸವರಾಜ ಅಂಗಡಿ**
(ಸಾ) ಪೋತ್ನಾಳ, (ತಾ) ಮಾನವಿ,
ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಜನತಾ ನಗರ, ತೊಣಚಿಕೊಪ್ಪಲ್,
ಮೈಸೂರ್–547097
Cell : 9141109799, 9986369118

**T.V. ರಮಣ**
NGR ಲೇಔಟ್, ರೂಪೇನಾ
ಅಗ್ರಹಾರ, ಬೆಂಗಳೂರು–560068.
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್
ಫೀಲ್ಡ್ ರೋಡ್, ಬೆಂಗಳೂರು–066
Cell : 9482516023

**ಯೋಗೇಶ್**
ಸೂಲನಾಯಕನಹಳ್ಳಿ (ಗ್ರಾಮ),
ತುಮಕೂರು (ಜಿಲ್ಲೆ).
ಸೆಲ್:8762523963,9740744424

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

ಸೃಷ್ಟಿ ಆದಿಯಲ್ಲಿ ದೇವರು ತನ್ನ ಜ್ಞಾನವನ್ನು ಆಕಾಶವಾಣಿಯಿಂದ ತಿಳಿಸಿದ್ದಾನೆ. ಆಕಾಶದಲ್ಲಿ ಶಬ್ದವಾಗಿ ಬಂದಿರುವ ದೈವಜ್ಞಾನವನ್ನು ಆಕಾಶದಲ್ಲೇ ಇದ್ದ ಸೂರ್ಯನು ಕೇಳಿದ್ದಾನೆ. ದೇವರು ಸೂರ್ಯನಿಗೆ ತನ್ನ ಜ್ಞಾನವನ್ನು ಮೊದಲು ತಿಳಿಸಿದ್ದಾನೆ. ಶಬ್ದ ರೂಪದಲ್ಲಿ ಬಂದಿರುವ ಜ್ಞಾನವು ಶಬ್ದವಾಗಿಯೇ ಅಡಗಿ ಹೋಗಿದೆ. ಯಾವ ಶಬ್ದವಾದರೂ ಶೂನ್ಯದಲ್ಲಿ ಬೆರೆತು ಹೋಗಿ ಕೇಳಿಸದಂತೆ ಹೋಗುವುದು. ಮನುಷ್ಯನು ಮಾತನಾಡುವ ಮಾತೊಂದರ ಶಬ್ದವು ಮನುಷ್ಯನಿಂದ ಸ್ವಲ್ಪ ದೂರವು ಪ್ರಯಾಣಿಸಿ ಕೇಳಿಸದಂತೆ ಅಡಗಿ ಹೋಗುತ್ತಿದೆ. ಸೃಷ್ಟಿ ಆದಿಯಲ್ಲಿ ಆಕಾಶದಿಂದ ಹುಟ್ಟಿದ ಶಬ್ದವು ಸ್ವಲ್ಪ ದೂರವು ಪ್ರಯಾಣಿಸಿ ಅಡಗಿ ಹೋಗಿದೆ. ಸೂರ್ಯ ಗ್ರಹಕ್ಕೆ ಹತ್ತಿರದಲ್ಲಿ ಹುಟ್ಟಿದ ಶಬ್ದವನ್ನು ಸೂರ್ಯನು ಕೇಳಿದ್ದಾನೆ. ಆಕಾಶದಿಂದ ಹೇಳಲ್ಪಟ್ಟಿರುವ ಜ್ಞಾನವನ್ನು ಅಥವಾ ಮಾತುಗಳನ್ನು ಅಂತಿಮ ದೈವ ಗ್ರಂಥವಾದ ಖುರಾನ್‌ನಲ್ಲಿ **"ವಹೀ"** ಎಂದಿದ್ದಾರೆ. 42ನೇ ಸೂರಾ 51ನೇ ಆಯತ್‌ನಲ್ಲಿ "ವಹೀಯಿಂದ ಹೇಳಲಾಗುವುದು" ಎಂದು ಇದೆ. ಆದರೆ ಶಬ್ದದಿಂದ ದೇವರು ಜ್ಞಾನವನ್ನು ತಿಳಿಸಲಾಗುವುದೆಂದು ಅರ್ಥ. ಮತಗಳು ಮತ ಗ್ರಂಥಗಳು ಬಂದ ನಂತರ ಇಸ್ಲಾಮ್ ಗ್ರಂಥವಾದ ಖುರಾನ್‌ನಲ್ಲಿ 'ವಹೀ' ಎಂದಿದ್ದಾರೆ. 'ವಹೀ' ಎಂದರೆ ಆಕಾಶ ಶಬ್ದದಿಂದ ಬಂದಿರುವ ಮಾತುಗಳೆಂದು ಅರ್ಥ. ಸೃಷ್ಟಿಯನ್ನು ಪ್ರಾರಂಭಿಸಿದ ಮೇಲೆ ಮೊದಲೇ ದೇವರು ಪ್ರಜೆಗಳಿಗೆ ತನ್ನ ಜ್ಞಾನವನ್ನು ತಿಳಿಸುವ ಸಲುವಾಗಿ ಆಕಾಶದಲ್ಲಿ ಶಬ್ದವನ್ನು ಹುಟ್ಟಿಸಿದ್ದಾನೆ. ಆ ಶಬ್ದವು ಸ್ವಲ್ಪ ಸಮಯ ಪ್ರಯಾಣಿಸಿ ಕೇಳಿಸದಂತೆ ಹೋಗಿದೆ. ಆಗ ಬಂದಿರುವ ಶಬ್ದವನ್ನು ಆಕಾಶದಲ್ಲಿರುವ ಸೂರ್ಯನು ಕೇಳಲ್ಪಟ್ಟಿದ್ದಾನೆ.

ಆಗ ಆಕಾಶವಾಣಿಯಿಂದ ಕೇಳಿದ ಜ್ಞಾನವನ್ನು ಸೂರ್ಯನಿಗೆ ಹೇಳಲಾಗಿದೆ. ಆದ್ದರಿಂದ ಸೂರ್ಯನಿಗೆ ಹತ್ತಿರವಾಗಿ ಶಬ್ದವು ಹುಟ್ಟಿ ಸೂರ್ಯನವರೆಗು ಪ್ರಯಾಣಿಸಿ ನಿಂತುಹೋಗಿದೆ. ಆದ್ದರಿಂದ ಮೊದಲು ಆಕಾಶದಲ್ಲಿ ಶಬ್ದದಿಂದ ಬಂದಿರುವ ಜ್ಞಾನವನ್ನು ಸೂರ್ಯನು ಮಾತ್ರ ಕೇಳಲ್ಪಟ್ಟಿದ್ದಾನೆ. ಸೂರ್ಯನು ಕೇಳಿದ ಜ್ಞಾನವನ್ನು ಐದು ಸಾವಿರ ವರ್ಷಗಳ ಪೂರ್ವವು

ಮೊಟ್ಟಮೊದಲ ಗ್ರಂಥವಾಗಿ ಬದಲಾಗಿದೆ. ಅದುವೇ "**ಪ್ರಥಮ ದೈವ ಗ್ರಂಥವು**". ನಂತರ ಸ್ವಲ್ಪ ಕಾಲಕ್ಕೆ ದ್ವಿತೀಯ ದೈವ ಗ್ರಂಥವಾಗಿ ತಯಾರಾಗಿದೆ. ಸ್ವಲ್ಪ ಕಾಲದ ನಂತರ ಅಂತಿಮ ದೈವ ಗ್ರಂಥವು ಸಹ ತಯಾರಾಗಿ ಬಂದಿದೆ. ಗ್ರಂಥಗಳು ಮೂರಾದರೂ ಗ್ರಂಥಗಳು ಬೇರೆಬೇರೆಯಾಗಿ ಇದ್ದರೂ ಆ ಗ್ರಂಥಗಳಲ್ಲಿ ದೇವರು ಮೊದಲು ಸೂರ್ಯನಿಗೆ ಹೇಳಿದ ಜ್ಞಾನವೇ ಇದೆ. ಸೂರ್ಯನಿಗೆ ಶಬ್ದ ರೂಪದಲ್ಲಿ ಹೇಳಿದ ಜ್ಞಾನವು ಶಬ್ದವು ಅಡಗಿ ಹೋಗಿರುವುದು ಯಾರಿಗೂ ತಿಳಿಯದಂತೆ ಹೋಗಿದೆ. ಆಕಾಶದಲ್ಲಿ ಹುಟ್ಟಿದ ಜ್ಞಾನವು ಆಕಾಶದಲ್ಲಿಯೇ ಅಡಗಿಹೋಗಿದೆ. ಶೂನ್ಯದಲ್ಲಿ ಹುಟ್ಟಿ ಶೂನ್ಯದಲ್ಲೇ ಬೆರೆತು ಹೋಗಿರುವ ಜ್ಞಾನವನ್ನು ಆ ದಿನವು ಸೂರ್ಯನು ಕೇಳಿಸಿಕೊಂಡಿದ್ದಾನೆ. ಆದ್ದರಿಂದ ಅದು ಸೂರ್ಯನಲ್ಲಿ ಸಜೀವವಾಗಿ ನಿಂತುಹೋಗಿದೆ. ತನ್ನಲ್ಲಿ ನಿಕ್ಷಿಪ್ತವಾಗಿರುವ ಜ್ಞಾನವನ್ನು ಸೂರ್ಯನು ಭೂಮಿ ಮೇಲಿರುವ ಮನುಷ್ಯರಿಗೆ ತಿಳಿಸಿದ್ದಾನೆ. ಹಾಗೆ ತಿಳಿಸಲಾಗಿರುವ ಜ್ಞಾನವೇ ಈಗ ದೈವ ಗ್ರಂಥಗಳ ರೂಪದಲ್ಲಿ ನಮ್ಮ ಮುಂದೆ ಇದೆ.

ದೇವರು ಹೇಳಿರುವ ಜ್ಞಾನವು ಗ್ರಂಥರೂಪವಾಗಿ ನಮ್ಮ ಮುಂದಿರುವ ಮೂರೂ ವಾಸ್ತವವೇ ಆದರೂ, ಅದರಲ್ಲಿ ಮನುಷ್ಯರ ಬರಹಗಳು ಸಹ ಸ್ವಲ್ಪ ಬೆರೆತಿವೆ. ದೇವರ ಜ್ಞಾನದ ಮುಂದೆ ಅಂತಹವುಗಳನ್ನು ಜ್ಞಾನಿಗಳಾದವರು ಸುಲಭವಾಗಿ ಗುರುತಿಸಬಹುದು. ಆದರೆ ಭೂಮಿಯಮೇಲೆ ಹುಟ್ಟಿದ ನಂತರ ಮನುಷ್ಯರು ಜ್ಞಾನವನ್ನು ತಿಳಿಯದಿರುವುದರಿಂದ ಗ್ರಂಥಗಳಲ್ಲಿ ಬೆರೆತಿರುವ ಮನುಷ್ಯರ ವಾಕ್ಯಗಳನ್ನು ಕೂಡ ದೇವರ ವಾಕ್ಯಗಳೇ ಎಂದುಕೊಳ್ಳುತ್ತಿದ್ದಾರೆ. ಯಾರಾದರಾಗಲಿ ಮುಂಚೆ ಜ್ಞಾನಿಯಾಗಿರುವವನು ಅಂದರೆ ದೈವಗ್ರಂಥವನ್ನು ಓದುವುದಕ್ಕಿಂತ ಮೊದಲೆ ಹುಟ್ಟಿನಿಂದಲೇ ಜ್ಞಾನಿ ಆಗಿರುವವನು, ಗ್ರಂಥದಲ್ಲಿ ಬೆರೆತಿರುವ ಮನುಷ್ಯರ ವಾಕ್ಯಗಳನ್ನು ಗುರುತಿಸಬಲ್ಲನು. ಎಲ್ಲರೂ ಹುಟ್ಟಿದ ನಂತರ ಜ್ಞಾನಿಗಳಾಗುವುದಕ್ಕೆ ಪ್ರಯತ್ನಿಸುವವರೇ. ಆದ್ದರಿಂದ ದೈವ ಗ್ರಂಥಗಳಲ್ಲಿ ಬೆರೆತಿರುವ ಮನುಷ್ಯರ ಮಾತುಗಳನ್ನು ಗುರುತಿಸಲಾಗುತ್ತಿಲ್ಲ. ದೈವವೊಂದರ ಸ್ವಚ್ಛವಾದ ಜ್ಞಾನವು ಬೇಕೆನ್ನುವವರಿಗೆ ದೇವರು ತನ್ನ ಜ್ಞಾನವನ್ನು ಸೋಸಿ, ಸ್ವಚ್ಛಗೊಳಿಸಿ ನಮಗೆ ಕೊಡುವನು.

ದೇವರು ಶಬ್ದ ರೂಪದಲ್ಲಿ ಹೇಳಿದ ಜ್ಞಾನವು ಮೂರು ಯುಗಗಳ ನಂತರ ಗ್ರಂಥರೂಪವಾಗಿದೆ. ಮೂರು ಯುಗಗಳು ಕಳೆದುಹೋಗಿ ಮೂರನೇ ಯುಗದ ಕೊನೆಯಲ್ಲಿ, ನಾಲ್ಕನೇ ಯುಗದ ಪ್ರಾರಂಭದಲ್ಲಿ ದೈವಜ್ಞಾನವು ಪ್ರಥಮ ದೈವ ಗ್ರಂಥವಾಗಿ ತಯಾರಾಗಿದೆ. ಪ್ರಥಮ ದೈವ ಗ್ರಂಥವನ್ನೇ ಭಗವದ್ಗೀತೆ ಎಂದು ಕರೆಯಲಾಗಿದೆ. ಮೊದಲ ಯುಗದಲ್ಲಿ ಮೊದಲೇ ಹೇಳಲಾದ ದೈವ ಜ್ಞಾನವು ಕಲಿಯುಗದ ಪ್ರಾರಂಭದಲ್ಲಿ ಗ್ರಂಥವಾಗಿ ಬರೆಯಲಾಗಿದೆ. ಮೂರು ಯುಗಗಳವರೆಗೂ ಗ್ರಂಥರೂಪವಾಗಿರಲಿಲ್ಲ. ಗ್ರಂಥರೂಪವಾದ ನಂತರ ಹೆಸರು ಇಡಲಾಗಿದೆ. ಗ್ರಂಥರೂಪವಾಗದಿರುವಾಗ ದೇವರು ಹೇಳಿದ ಶಬ್ದರೂಪವಾದ ಜ್ಞಾನಕ್ಕೆ ಪ್ರತ್ಯೇಕವಾದ ಒಂದು ಹೆಸರು ಇದ್ದಿತು. ದೇವರು ಹೇಳಿದ ಜ್ಞಾನವು ಸೃಷ್ಟಿಸಿರುವ ಪ್ರಪಂಚಕ್ಕಿಂತ ಬೇರೆಯಾಗಿರುವುದರಿಂದ ಅದೇ ಅರ್ಥವಿರುವಂತೆ ಹೇಳುತ್ತಿದ್ದರು. **"ಜ"** ಎಂದರೆ 'ಹುಟ್ಟುವುದು' ಎಂದರ್ಥ. **"ಪರ"** ಎಂದರೆ 'ಬೇರೆಯಾಗಿದೆ ಎಂದು' ಅರ್ಥವು. ಹುಟ್ಟಿರುವುದಕ್ಕಿಂತ ಬೇರೆಯಾಗಿ ಇದೆ ಎನ್ನುವ ಅರ್ಥವು ಬರುವಂತೆ ವಾಣಿ (ಶಬ್ದ) ಯಿಂದ ಬಂದಿರುವ ಜ್ಞಾನವನ್ನು **"ಜಪರ"** ಎಂದು ಕರೆಯುವರು. ಗ್ರಂಥರೂಪವಾಗದ ಜಪರ ಜ್ಞಾನವು ಮೂರು ಯುಗಗಳ ನಂತರ "ಭಗವದ್ಗೀತೆ" ಎನ್ನುವ ಹೆಸರಿಂದ 5000 ವರ್ಷಗಳ ಪೂರ್ವದಲ್ಲಿಯೇ ತಯಾರಾಗಿದೆ. ಮೊದಲು "ಜಪರ" ಎಂದು ಕರೆಯಲಾಗಿರುವ ಜ್ಞಾನವು ಗ್ರಂಥವಾಗಿ ತಯಾರಾದ ನಂತರ ಅದನ್ನು ಪ್ರಥಮ ದೈವ ಗ್ರಂಥವೆಂದು ಹೇಳಿದ್ದಾರೆ. ಪ್ರಥಮ ದೈವ ಗ್ರಂಥದಲ್ಲಿನ ಜ್ಞಾನವು ಗ್ರಂಥರೂಪವಾಗದ ಮೊದಲು "ಜಪರ" ಎನ್ನುವ ಹೆಸರಿನಿಂದ ಕರೆಯಲಾಗುತ್ತಿತ್ತು. ನಂತರ ಪ್ರಥಮ ದೈವಗ್ರಂಥ ದಲ್ಲಿರುವ ಜ್ಞಾನವೇ ದ್ವಿತೀಯ, ಅಂತಿಮ ದೈವ ಗ್ರಂಥಗಳಾಗಿ ರೂಪಾಂತರ ಗೊಂಡಿದೆ. ಜಪರ ಎನ್ನುವ ಶಬ್ದರೂಪವಾಗಿ ಬಂದಿರುವ ಜ್ಞಾನವು ಭಗವದ್ಗೀತೆಯಾಗಿ ಬದಲಾಗಿ ನಂತರ ಎರಡು ಗ್ರಂಥಗಳಾಗಿ ಬಂದಿದೆ. ಅದರಲ್ಲಿ ಕೊನೆಯದು ಅಂತಿಮ ದೈವಗ್ರಂಥವು.

ದೇವರು ಗ್ರಂಥರೂಪಗಳಲ್ಲಿ ಮನುಷ್ಯರಿಗೆ ಕೊಟ್ಟಿರುವ ಜ್ಞಾನವು ಒಂದೇ ಆದರೂ, ಅದು ಮೂರು ಗ್ರಂಥಗಳಾಗಿ ಕಾಣಿಸುತ್ತಿದೆ. ದೇವರು ಕೊಟ್ಟಿರುವ

ಗ್ರಂಥ ಜ್ಞಾನವನ್ನು ಪ್ರಥಮ, ದ್ವಿತೀಯ, ಅಂತಿಮ ಎನ್ನುವ ಹೆಸರುಗಳಿಂದ ಹೇಳಿಕೊಳ್ಳುತ್ತಿದ್ದೇವೆ. ಪ್ರಸ್ತುತ ಅಂತಿಮ ದೈವಗ್ರಂಥದಲ್ಲಿನ ಜ್ಞಾನ ವಾಕ್ಯಗಳನ್ನು ಕುರಿತು ಪ್ರಸ್ತಾಪಿಸಿಕೊಳ್ಳುತ್ತಿದ್ದೇವೆ. ದೈವಗ್ರಂಥದಲ್ಲಿ ದೇವರ ವಿಷಯಗಳೇ ಇರುವವು. ದೇವರ ವಿಷಯಗಳೆಂದರೇ 'ದೇವರ ಜ್ಞಾನವು' ಎಂದು ಅರ್ಥ. ಅಂತಿಮ ದೈವ ಗ್ರಂಥದಲ್ಲಿ 'ಜಪರ' ಎನ್ನುವ ಹೆಸರು ಈ ದಿನ ಮನುಷ್ಯರಿಗೆ ಪೂರ್ತಿ ಹೊಸ ಹೆಸರಾಗಿದೆ. ನಾವು ಈ ಹೆಸರನ್ನು ಕಲ್ಪಿಸಿ ಹೇಳಿದಂತೆ ತುಂಬಾ ಜನ ತಿಳಿದುಕೊಳ್ಳುವ ಅವಕಾಶವಿದೆ. ಆದರೆ ನಮ್ಮ ಮಾತು ನಿಜ ಎನ್ನುವುದಕ್ಕೆ 'ಜಬುರ' ಗ್ರಂಥವು ಪೂರ್ವವು ಇತ್ತು ಎಂದು ಕೆಲವರು ಮುಸ್ಲಿಮ್‌ರು ಹೇಳಿಕೊಳ್ಳುವುದು ನೋಡಿದ್ದೇನೆ. ಗ್ರಂಥಗಳು ನಾಲ್ಕು ಇವೆಯೆಂದು ಒಂದು ಜಬುರ, ಎರಡು ತೌರಾತ್, ಮೂರು ಇಂಜೀಲ್, ನಾಲ್ಕು ಖುರಾನ್ ಎಂದು ಹೇಳುತ್ತಿದ್ದಾರೆ. ಆದರೆ 'ಜಪರ' ಎನ್ನುವ ಪದವು ಕಾಲಕ್ರಮೇಣ 'ಜಬುರ'ವಾಗಿ ಬದಲಾಗಿದೆ. ಜಬುರ ಎನ್ನುವುದು ವಾಣಿ (ಶಬ್ದರೂಪವಾದ ಜ್ಞಾನವು) ಮಾತ್ರವೇ ಎಂದು ಅವರಿಗೆ ತಿಳಿದಿಲ್ಲ. ಜಬುರ ಎಂದು ಹೇಳಲಾಗಿರುವುದು ವಾಸ್ತವವಾಗಿ ಗ್ರಂಥರೂಪದಲ್ಲಿ ಇಲ್ಲವೆಂದು ಅದರ ಅಸಲು ಹೆಸರು ಜಪರ ಎಂದು 'ಜಪರ' ಶಬ್ದವಾಗಿ ಬಂದಿರುವ ಜ್ಞಾನವೆಂದು ನಾವು ಬಹಳ ಸಲ ಹೇಳಿದ್ದೇವೆ. ಗ್ರಂಥಗಳಲ್ಲಿ ಕೂಡ ಇದೇ ವಿಷಯವನ್ನು ಬರೆದಿದ್ದೇವೆ. ಮುಸ್ಲಿಮ್ ಹಿರಿಯರು ನಾಲ್ಕು ಗ್ರಂಥಗಳ ಹೆಸರುಗಳಲ್ಲಿ 'ಜಬುರ' ಎನ್ನುವ ಮೊದಲ ಗ್ರಂಥದ ಹೆಸರು ಹೇಳುತ್ತಿದ್ದಾರೆ. ವಾಸ್ತವವಾಗಿ ಅವರು ನೋಡಿರುವುದು ಅವರಿಗೆ ತಿಳಿದಿರುವ ಇಂಜೀಲ್, ಖುರಾನ್ ಎನ್ನುವ ಎರಡು ಗ್ರಂಥಗಳು ಮಾತ್ರವೇ. "ತೌರಾತ್" ಎನ್ನುವ ಗ್ರಂಥವನ್ನು ಸಹ ಅವರು ನೋಡಲಿಲ್ಲ. ಅದು ಯಾವ ಭಾಷೆಯಲ್ಲಿದೆ ಎನ್ನುವ ವಿಷಯವೂ ಸಹ ಯಾರಿಗೂ ತಿಳಿದಿಲ್ಲ. 'ಜಬುರ' ಎನ್ನುವುದು ಗ್ರಂಥವೇ ಅಲ್ಲ. ಜ್ಞಾನವು ಗ್ರಂಥರೂಪವಾಗದೇ ಇರುವಾಗ ಇದ್ದ ಹೆಸರೇ "ಜಪರ" ಎಂದು ಅದನ್ನೇ ಕಾಲಕ್ರಮೇನ "ಜಬುರ" ಎನ್ನುವ ಹೆಸರಾಗಿ ಬದಲಾವಣೆಯಾಗಿದೆ ಎಂದು ಯಾರಿಗೂ ತಿಳಿದಿಲ್ಲ. ಜಪರ ಎನ್ನುವ ಮೂರಕ್ಷರಗಳಲ್ಲಿ ಮಧ್ಯದಲ್ಲಿನ ಅಕ್ಷರವು ಬದಲಾಗಿ ಜಬುರ ಎಂದು

ಕರೆಯಲಾಗುತ್ತಿದೆ. "ತೌರಾತ್" ಗ್ರಂಥವನ್ನೇ ಯಾರೂ ನೋಡದಿದ್ದಾಗ ಗ್ರಂಥವೇ ಆಗದಂತಹ 'ಜಬುರ' ವನ್ನು ಯಾರೂ ನೋಡುವುದಕ್ಕೆ ಅವಕಾಶವೇ ಇಲ್ಲ. 'ಜಬುರ' ಎನ್ನುವ ಹೆಸರು ಕೇಳಿದವರಿರಬಹುದೇ ಹೊರತು, ಜಬುರ ಗ್ರಂಥವನ್ನು ನೋಡಿದವರು ಭೂಮಿಯ ಮೇಲೆ ಯಾರೂ ಇಲ್ಲ. ಸೃಷ್ಟಿ ಆದಿಯಲ್ಲಿ ಆಕಾಶದಿಂದ ಹೇಳಲಾಗಿರುವ ದೈವಜ್ಞಾನಕ್ಕೆ ಜಪರ ಎನ್ನುವ ಹೆಸರು ಇಟ್ಟಾಗ, ಅದು ಕೊನೆಗೆ ಜಬುರ ಎನ್ನುವ ಹೆಸರಾಗಿ ಬದಲಾವಣೆಯಾಗಿದೆ. ಹಾಗೆ ಹೆಸರು ಬದಲಾವಣೆ ಯಾಗುವುದೇ ಅಲ್ಲದೇ ಅದು ಒಂದು ಗ್ರಂಥವೆಂದು ಸುದ್ದಿಯಾಗಿ ಪ್ರಚಾರವಾಗಿ ಹೋಯಿತು. ಸುದ್ದಿಯನ್ನು ಪ್ರಚಾರ ಮಾಡಿದರೂ ಅದನ್ನು ನೋಡಿದವರು ಮಾತ್ರ ಯಾರೂ ಇಲ್ಲ. ಈಗ ಪುನಃ ಸೃಷ್ಟಿ ಆದಿಯೊಳಗೆ ಹೋಗಿ ನೋಡೋಣ.

ಸೃಷ್ಟಿ ಆದಿಯಲ್ಲಿ ಆಕಾಶವಾಣಿಯಿಂದ ದೈವ ಜ್ಞಾನವು ಕೇಳಿಸಲ್ಪಟ್ಟಿರುವಾಗ ಅದನ್ನು ಕೇಳಿಸಿಕೊಂಡವನು ಒಬ್ಬ ಸೂರ್ಯನು ಮಾತ್ರವೇ. ಆಕಾಶದಲ್ಲಿ ಭೂತಗಳು ಗ್ರಹಗಳು ಎಷ್ಟೋ ಇವೆ. ಗ್ರಹಗಳಲ್ಲಿ ಒಬ್ಬನಾದ ಸೂರ್ಯನು ಆಕಾಶವಾಣಿಯಿಂದ ಬಂದಿರುವ ಶಬ್ದದಿಂದ ದೈವ ಜ್ಞಾನವನ್ನು ಗ್ರಹಿಸಿದ್ದಾನೆ. ಕೇಳಲ್ಪಟ್ಟಿರುವುದನ್ನು ಗ್ರಹಿಸಬಲ್ಲ ಸಾಮರ್ಥ್ಯ ಇರುವವನು ಸೂರ್ಯನು. ಆದ್ದರಿಂದ ಸೂರ್ಯನನ್ನು 'ಗ್ರಹವು' ಎಂದು ಹೇಳುತ್ತಿದ್ದೇವೆ. 'ಗ್ರಹವು' ಎಂದರೆ ಗ್ರಹಿಸುವ ಸಾಮರ್ಥ್ಯ ವುಳ್ಳವನೆಂದು ಅರ್ಥವು. ಸೂರ್ಯನು ಆಕಾಶದಿಂದ ಬಂದಿರುವ ಶಬ್ದದಿಂದ ಜ್ಞಾನವನ್ನು ಗ್ರಹಿಸಿದ ನಂತರ ಅದೇ ಜ್ಞಾನವನ್ನು ಭೂಮಿಯ ಮೇಲೆ ಮನುವು ಎನ್ನುವ ವ್ಯಕ್ತಿಗೆ ತಿಳಿಸಿದ್ದಾನೆ. ಭೂಮಿಯ ಮೇಲೆ ಇರುವ ಮನುವಿನಿಂದ ಸೂರ್ಯನು ಹೇಳಿರುವ ಜ್ಞಾನ ಪ್ರಜೆಗಳಲ್ಲಿ ಹರಡಿ ಹೋಗಿದೆ. ಇಲ್ಲಿ ಕೆಲವರಿಗೆ ಒಂದು ಪ್ರಶ್ನೆ ಬರಬಹುದು. ಅದು ಏನೆಂದರೆ! ಆಕಾಶವು ತನ್ನ ಶಬ್ದವನ್ನು ಸೂರ್ಯನಿಗೆ ಯಾವ ಭಾಷೆಯಲ್ಲಿ ಕೇಳಿಸಿದೆ? ಆಕಾಶವು ತನ್ನ ಶಬ್ದದ ಮೂಲಕ ಯಾವ ಭಾಷೆಯಲ್ಲಿ ಹೇಳಲಾಗಿದೆಯೋ ನಾವು ತಿಳಿಯಬೇಕಾಗಿದೆ. ಅಷ್ಟೇ ಅಲ್ಲದೆ ಆಕಾಶವು

ವಿಶಾಲವಾಗಿರುವುದು. ವಿಶಾಲವಾದ ಆಕಾಶದಲ್ಲಿ ಸೂರ್ಯನು ಎಷ್ಟೋ ದೊಡ್ಡದಾಗಿದ್ದರೂ ಬಹು ಸ್ವಲ್ಪವಾಗಿಯೇ ಕಾಣಿಸುತ್ತಿದ್ದಾನೆ. ಅಂತಹ ಸೂರ್ಯನಿಗೆ ಆಕಾಶವು ಯಾವ ಭಾಷೆಯಲ್ಲಿ ಹೇಳಿದೆ. ಎಷ್ಟು ಜೋರಾಗಿ ಹೇಳಿದೆ ಎನ್ನುವ ಪ್ರಶ್ನೆಗಳು ಬರುತ್ತವೆ. ಎಷ್ಟು ಶಬ್ದದಿಂದ ಹೇಳಿದ್ದಾರೋ, ಯಾವ ಭಾಷೆಯಲ್ಲಿ ಹೇಳಿದ್ದಾರೋ ತಿಳಿಯುವುದಕ್ಕೆ ಆಗ ಏನು ನಡೆದಿದೆಯೋ ತಿಳಿಯಬೇಕು.

ಸೃಷ್ಟಿ ಆದಿಯಲ್ಲಿ ಭಾಷೆಯೇ ಇಲ್ಲ. ಪ್ರಜೆಗಳು ಸನ್ನೆಗಳಿಂದ ಒಬ್ಬರ ಭಾವನೆಯನ್ನು ಮತ್ತೊಬ್ಬರು ತಿಳಿದುಕೊಳ್ಳುತ್ತಿದ್ದರು. ನಂತರ ಸ್ವಲ್ಪ ಕಾಲಕ್ಕೆ ಶಬ್ದಗಳ ಮೂಲಕ ಭಾವನೆಯನ್ನು ತಿಳಿಯುವುದಕ್ಕೆ ಅಭ್ಯಾಸವಾದರು. ಶಬ್ದಗಳಲ್ಲೇ ಭಾಷೆಯನ್ನು ತಯಾರು ಮಾಡಿಕೊಂಡಿದ್ದರು. ಇದು ಪ್ರಜೆಗಳ ಸ್ಥಿತಿ. ಪ್ರಜೆಗಳು ಒಂದು ಭಾವನೆಯನ್ನು ಗ್ರಹಿಸಿಕೊಳ್ಳುವುದಕ್ಕೆ ಬಹಳ ಕಷ್ಟಪಡುತ್ತಿದ್ದರು. ಈ ಕಡೆ ಪ್ರಜೆಗಳು ಈ ರೀತಿಯಾಗಿ ಕ್ರಮವಾಗಿ ಭಾಷೆಯನ್ನು ತಯಾರು ಮಾಡಿಕೊಂಡಿದ್ದಾರೆ. ಆದರೆ ಸೃಷ್ಟಿ ಆದಿಯಲ್ಲಿ ಮನುಷ್ಯರ ಮಧ್ಯ ಭಾಷೆ ಏರ್ಪಡುವ ಸಮಯದಲ್ಲಿ ಆಕಾಶವಾಣಿ ಪ್ರಜೆಗಳಿಗೋಸ್ಕರ ಅಗತ್ಯವಾದ ಜ್ಞಾನವನ್ನು ಭಾಷೆ ಇಲ್ಲದೆ ಹೇಳಿದೆ. ನಾವು ಮಾತನಾಡುವ ಯಾವ ಭಾಷೆಯಲ್ಲೂ ಆಕಾಶವು ಹೇಳಲಿಲ್ಲ. ಸೂರ್ಯನು ಕೇಳಲೂ ಇಲ್ಲ. ಆಕಾಶದಲ್ಲಿ ಇದ್ದ ಸೂರ್ಯನು ಆಕಾಶದಿಂದ ದೈವಜ್ಞಾನವನ್ನು ಗ್ರಹಿಸಿಕೊಂಡಿದ್ದಾನೆ. ಆದರೆ ಆಕಾಶವು ಮನುಷ್ಯರ ಭಾಷೆಯಲ್ಲಿ ಹೇಳಲಿಲ್ಲ. ಆಕಾಶವು ಶಬ್ದ ರೂಪದಲ್ಲಿ ತಿಳಿಸುವುದನ್ನು ಸೂರ್ಯನು ಗ್ರಹಿಸಿಕೊಂಡಿದ್ದಾನೆ. ಸೂರ್ಯನು ಆಕಾಶದಿಂದ ಬಂದಿರುವ ಶಬ್ದವನ್ನು ಕೇಳಿ ದೈವಜ್ಞಾನವನ್ನು ತಿಳಿದುಕೊಂಡಿದ್ದಾನೆ. ಆಕಾಶವು ತನ್ನ ಶಬ್ದದ ಮೂಲಕ ದೈವಜ್ಞಾನವನ್ನು ತಿಳಿಸಿದರೂ, ಆ ದಿನ ಒಬ್ಬ ಸೂರ್ಯನು ಹೊರತು ಉಳಿದವರು ಯಾರೂ ತಿಳಿಯದೆ ಹೋಗಿದ್ದಾರೆ. ಆಕಾಶದಿಂದ ಬಂದಿರುವ ಶಬ್ದವನ್ನು ಆ ದಿನ ಪ್ರಜೆಗಳು ಸಹ ಕೇಳಿದರು. ಆದರೆ ಆ ಶಬ್ದವು ತಮಗೆ ತಿಳಿದಿರುವ ಭಾಷೆಯಲ್ಲಿ ಇಲ್ಲದಿರುವುದರಿಂದ ಪ್ರಜೆಗಳಿಗೆ ಜ್ಞಾನವು ತಿಳಿಯಲಾಗಲಿಲ್ಲ. ಆಕಾಶದಿಂದ ಬಂದಿರುವ ಶಬ್ದವು ಎಲ್ಲರಿಗೂ ಕೇಳಿಸುವ

ಅವಕಾಶವು ದೇವರು ಕಲ್ಪಿಸಿದ್ದಾನೆ, ಆದರೂ ಪ್ರಜೆಗಳು ತಿಳಿಯದೆ ಹೋಗಿದ್ದಾರೆ. ಆದರೆ ಆ ದಿನ ಆಕಾಶವು ಮನುಷ್ಯರಿಗೆ ತಿಳಿದ ಭಾಷೆಯಲ್ಲಿ ಜ್ಞಾನವನ್ನು ಹೇಳಲಿಲ್ಲ. ತನಗೆ ತಿಳಿದ ಭಾಷೆಯಲ್ಲಿ ಹೇಳಲಾಗಿದೆ. ಅದನ್ನು ಸೂರ್ಯನು ದೊಡ್ಡ ಗ್ರಹವಾದ್ದರಿಂದ ಗ್ರಹಿಸಿಕೊಂಡಿದ್ದಾನೆ. ಆಕಾಶವು ಒಂದು ಸಲ ದೈವಜ್ಞಾನವನ್ನು ಹೇಳಿ ಸುಮ್ಮನಾಗಿರಲಿಲ್ಲ. ಆ ದಿನ ಹೇಳಿದ ಜ್ಞಾನವನ್ನು ನಂತರವೂ ಸಹ ಆಗಾಗ ತಿಳಿಸಿದೆ. ದೇವರ ಆಜ್ಞೆ ಪಾಲಿಸುವ ವಿಧಾನದಲ್ಲಿ ಪ್ರಜೆಗಳನ್ನು ಜ್ಞಾನವಂತರಾಗಿ ಮಾಡುವುದಕ್ಕೆ ಆಕಾಶವು ಈಗಲೂ ಸಹ ಜ್ಞಾನವನ್ನು ಹೇಳುತ್ತಲೇ ಇದೆ. ಆದರೂ ಅದು ನಮಗೆ ತಿಳಿಯದು.

ಮೊದಲನೇ ಸಲ ಆಕಾಶದಿಂದ ದೇವರು ಜ್ಞಾನವನ್ನು ತಿಳಿಸಿದ್ದಾನೆ. ಸೃಷ್ಟಿ ಆದಿಯಲ್ಲಿ ಪ್ರಪಂಚವು ಏನೂ ತಿಳಿಯದ ಚಿಕ್ಕ ಮಗುವಿನಂತಹದು. ದೇವರು ತನ್ನ ಜ್ಞಾನವನ್ನು ಮೂರು ವಿಧಗಳ ಮನುಷ್ಯರಿಗೆ ತಿಳಿಸುವುದಕ್ಕೆ ಅವಕಾಶವಿದೆ. ಆ ವಿಷಯವನ್ನು ತನ್ನ ಕೊನೆಯ ದೈವಗ್ರಂಥವಾದ ಖುರಾನ್‌ನಲ್ಲಿ ಸೂರಾ 42, ಆಯತ್ 51ರಲ್ಲಿ ಈ ರೀತಿ ಹೇಳಿದ್ದಾರೆ. **(42–51) "ದೇವರು ಯಾವ ಮನುಷ್ಯನೊಂದಿಗೂ ಪ್ರತ್ಯಕ್ಷವಾಗಿ (ನೇರವಾಗಿ) ಮಾತನಾಡುವುದಿಲ್ಲ. ದೇವರೊಂದಿಗೆ ಮನುಷ್ಯನು ಮಾತನಾಡುವುದು ಸಾಧ್ಯವಾಗುವ ಕೆಲಸವಲ್ಲ. ದೇವರು ತನ್ನ ಜ್ಞಾನವನ್ನು ವಾಣಿ (ವಹಿ) ಯಿಂದ ಅಂದರೆ ಶಬ್ದದಿಂದ ತಿಳಿಸುವನು. ಅಥವಾ ತೆರೆಮರೆಯಿಂದ ತಿಳಿಸುತ್ತಾನೆ. ಇಲ್ಲವೇ ತನ್ನ ಜ್ಞಾನವನ್ನು ತಿಳಿಸುವುದಕ್ಕೆ ತನ್ನ ಪ್ರತಿನಿಧಿಯನ್ನು ಕಳುಹಿಸುತ್ತಾನೆ. ಆತನು ಮಹೋನ್ನತನು ಹಾಗೂ ಬಹಳ ವಿವೇಕವಂತನು."** ಮಗು ಶಿಶುದಶೆಯಲ್ಲಿ ಇದ್ದಾಗ, ತಾಯಿ ಹೇಳುವ ಮಾತುಗಳನ್ನು ಅರ್ಥಮಾಡಿಕೊಳ್ಳುವ ಸಾಮರ್ಥ್ಯವು ಇಲ್ಲದಿದ್ದಾಗ, ತಾಯಿ ತನ್ನ ಭಾವನೆಗಳನ್ನು ಶಬ್ದದಿಂದ ತಿಳಿಸುತ್ತಾಳೆ. ತಾಯಿ ಮಾಡಿದ ಶಬ್ದವು ಭಾಷೆಯಾಗಿ ಇರುವುದಿಲ್ಲ. ಭಾಷೆ ಮಕ್ಕಳಿಗೆ ತಿಳಿಯದಿರುವುದರಿಂದ ಗಿಲಿಕೆಯ ಶಬ್ದದಿಂದ ಚಪ್ಪಾಳೆಯ ಶಬ್ದದಿಂದ ಬಾಯಿಯಿಂದ ಮಾಡುವ ಶಬ್ದದಿಂದ ತನ್ನ ಶಿಶು ನೋಟವನ್ನು ತನ್ನ ಕಡೆ ಬರುವಂತೆ ತನ್ನನ್ನು ನೋಡುವಂತೆ

ಮಾಡುವುದು. ಅದೇ ರೀತಿ ದೇವರು ಜ್ಞಾನವನ್ನು ಮನುಷ್ಯರಿಗೆ ತಿಳಿಸುವ ಮೂರು ವಿಧಾನದಲ್ಲಿ ಮೊದಲು ಸೃಷ್ಟಿ ಆದಿಯಲ್ಲಿ ಆಕಾಶವು ಶಬ್ದದಿಂದ ತನ್ನ ಜ್ಞಾನವನ್ನು ತಿಳಿಸಿದಾಗ, ಅದನ್ನು ಸೂರ್ಯನು ಗ್ರಹಿಸಿ ಸ್ವಲ್ಪ ಕಾಲಕ್ಕೆ ಮನುಷ್ಯರು ಗ್ರಹಿಸುವ ಭಾಷೆಯಲ್ಲಿ ಭೂಮಿಯ ಮೇಲೆ ಮನುವು ಎನ್ನುವ ವ್ಯಕ್ತಿಗೆ ತಿಳಿಸಿದ್ದಾನೆ. ಅವನಿಂದ ಸಮಸ್ತ ಮಾನವರಿಗೂ ದೇವರು ಮೊದಲು ತಿಳಿಸಿರುವ ಜ್ಞಾನವು ತಿಳಿದಿದೆ. ಅದೇ ಜ್ಞಾನವನ್ನೇ ನಂತರ ಎರಡು ಸಲ ಹೇಳಲಾಗಿದೆ. ಹಾಗೆ ಎರಡು ಸಲ ಹೇಳಿದ ಜ್ಞಾನವು ಭಾರತದೇಶದಲ್ಲಿ ಭಗವದ್ಗೀತೆಯಾಗಿ ಇಸ್ರಾಯೇಲ್ ದೇಶದಲ್ಲಿ ಬೈಬಲ್ ಆಗಿ ಗ್ರಂಥರೂಪವಾಗಿದೆ. ಅವುಗಳನ್ನೇ ಅಂದರೆ ಭಗವದ್ಗೀತೆಯನ್ನು ಪ್ರಥಮ ದೈವ ಗ್ರಂಥವಾಗಿಯೂ, ಬೈಬಲ್‌ನ್ನು ದ್ವಿತೀಯ ದೈವಗ್ರಂಥವಾಗಿಯೂ ಹೇಳುತ್ತಿದ್ದಾರೆ. ಮೊದಲು ತಯಾರಾದ್ದರಿಂದ ಭಗವದ್ಗೀತೆಯನ್ನು "ಪ್ರಥಮ ದೈವ ಗ್ರಂಥ" ಎಂದು ಹೇಳುತ್ತಿದ್ದಾರೆ. ನಂತರ ತಯಾರಾಗಿರುವುದು ಬೈಬಲ್ (ಇಂಜೀಲ್) ಇದನ್ನು ದ್ವಿತೀಯ ದೈವಗ್ರಂಥವಾಗಿಯೂ ಅಥವಾ ಮಧ್ಯ ದೈವಗ್ರಂಥವಾಗಿಯೂ ಹೇಳುತ್ತಿದ್ದಾರೆ. ಈ ಎರಡು ಗ್ರಂಥದಲ್ಲಿನ ಬೋಧನೆಯನ್ನು ದೈವ ಪ್ರತಿನಿಧಿಗಳು ಎರಡು ಬೇರೆಬೇರೆ ದೇಶಗಳಲ್ಲಿ ಎರಡು ಬೇರೆಬೇರೆ ಕಾಲಗಳಲ್ಲಿ ಎರಡು ತರಹದ ಬೇರೆಬೇರೆ ರೂಪಗಳಲ್ಲಿ ತಿಳಿಸಿದ್ದಾರೆ. ಆದ್ದರಿಂದ ದೇವರು ಖುರಾನ್ ಗ್ರಂಥದಲ್ಲಿ ಹೇಳಿದಂತೆ, ತನ್ನ ಪ್ರತಿನಿಧಿಯಿಂದ ಜ್ಞಾನವನ್ನು ಹೇಳುವೆನೆನ್ನುವ ಮಾತು ನೆರವೇರಿದೆ. ಮೊದಲು ವಾಣಿಯಿಂದ ಎರಡನೇ ಸಲ ತನ್ನ ಪ್ರತಿನಿಧಿಯಿಂದ ಮೂರನೇ ಸಲ ತೆರೆಹಿಂಬದಿಯಿಂದ ಜಿಬ್ರಯೇಲ್‌ನಿಂದ ತಿಳಿಸಿರುವುದರಿಂದ, ತೆರೆಹಿಂಬದಿಯಿಂದ ಜ್ಞಾನವನ್ನು ತಿಳಿಸುವೆನು ಎನ್ನುವ ಮಾತು ಸಹ ನೆರವೇರಿದೆ. ದೇವರು ಹೇಳಿದ ಮೂರು ವಿಧಾನಗಳು ನೆರವೇರಿದಂತಾಗಿವೆ. ದೇವರು ಹೇಳಿದ ಮೂರು ವಿಧಾನಗಳಲ್ಲಿ ಕೊನೆಯದಾಗಿ ನೆರವೇರಿರುವುದು 'ತೆರೆಹಿಂಬದಿಯಿಂದ ತಿಳಿಸುವೆನು' ಎನ್ನುವ ಮಾತು ಆದುದರಿಂದ ತೆರೆಹಿಂಬದಿಯಿಂದ ಹೇಳಿದ ಜ್ಞಾನವು ಗ್ರಂಥರೂಪವಾಗಿದ್ದಾಗ ಆ ಗ್ರಂಥವನ್ನು 'ಕೊನೆಯ ದೈವ ಗ್ರಂಥ' ಎಂದು ಹೇಳಿದ್ದಾರೆ.

ಖುರಾನ್ ಅನ್ನು ಕೊನೆಯ ದೈವಗ್ರಂಥ ಎನ್ನುವುದಕ್ಕೆ ಕಾರಣವೇನೆಂದು ಬಹಳ ಜನರಿಗೆ ತಿಳಿಯದೆಂದೇ ಹೇಳಬಹುದು. ದೇವರು ಪ್ರಜೆಗಳಿಗೆ ಜ್ಞಾನವನ್ನು ಮೂರು ವಿಧಗಳಾಗಿ ಬೋಧಿಸುತ್ತೇನೆಂದು ಹೇಳಿರುವುದರಿಂದ, ಆ ಮೂರು ವಿಧಗಳಲ್ಲಿ ತೆರೆಹಿಂಬದಿಯಿಂದ ಹೇಳುತ್ತಾನೆನ್ನುವ ಮಾತು, ಎರಡು ವಿಧಾನಗಳು ಮುಗಿದುಹೋಗಿ ಕೊನೆಯದಾಗಿ ಮೂರನೆಯ ವಿಧಾನವಾಗಿ ನೆರವೇರಿರುವುದರಿಂದ, ಖುರಾನ್‌ನನ್ನು **"ಅಂತಿಮ ದೈವ ಗ್ರಂಥ"** ಎನ್ನುವುದಕ್ಕೆ ಅವಕಾಶವು ಏರ್ಪಟ್ಟಿದೆ. ಆಕಾಶವಾಣಿಯಿಂದ ಹೇಳಲಾಗಿರುವುದು ದೇವರ ಪ್ರಥಮ ವಿಧಾನವಾದ್ದರಿಂದ, ಸೂರ್ಯನ ಜ್ಞಾನವು ಕೃಷ್ಣನಿಂದ ಹೇಳಿದ ಭಗವದ್ಗೀತೆ ಯಾದರೂ, ಹೇಳಿರುವುದು ಆಕಾಶವೆಂದೇ ಭಾವಿಸುವುದರಿಂದ, ಪ್ರಥಮ ದೈವಗ್ರಂಥವಾಗಿ 'ಭಗವದ್ಗೀತೆ'ಯನ್ನು ಹೇಳುತ್ತಿದ್ದೇವೆ. ಎರಡನೆಯ ಸಲ ದೈವ ಪ್ರತಿನಿಧಿ ಹೇಳಿರುವುದು ನಡೆದಿರುವುದರಿಂದ 'ದ್ವಿತೀಯ ದೈವ ಗ್ರಂಥವು' ಎಂದು ಬೈಬಲ್‌ನ್ನು ಹೇಳುವುದು ನಡೆದಿದೆ. ಈ ಮೂರು ಗ್ರಂಥಗಳೇ ಪ್ರಪಂಚ ಇರುವವರೆಗೂ ಅದೇ ಸ್ಥಾನದಲ್ಲಿ ಇರುವವು. ಈ ಮೂರು ಗ್ರಂಥಗಳ ನಂತರ ದೇವರ ಜ್ಞಾನವು ಬಂದರೂ ಅವು ದೈವ ಗ್ರಂಥಗಳಾದರೂ **"ಪ್ರಥಮ", "ಮಧ್ಯಮ", "ಅಂತಿಮ"** ಎನ್ನುವ ಬಿರುದುಗಳು ಈ ಮೂರು ಗ್ರಂಥಗಳಿಗೆ ಯಾವಾಗಲೂ ಶಾಶ್ವತವಾಗಿ ಇರುವವು. ಅಂತಿಮ ದೈವಗ್ರಂಥವು ಖುರಾನ್ ನಂತರ ಖುರಾನ್‌ನನ್ನು ಮೀರಿದ ಜ್ಞಾನ ಗ್ರಂಥರೂಪದಲ್ಲಿ ಬಂದರೂ, ಅದು ದೈವಗ್ರಂಥವೆನಿಸಿಕೊಳ್ಳುತ್ತದೆ ಆದರೆ, ಅಂತಿಮ ದೈವಗ್ರಂಥವೆನ್ನುವ ಹೆಸರು ಇತರ ದೈವಗ್ರಂಥಗಳಿಗೆ ಹೇಳುವುದಕ್ಕೆ ಸಾಧ್ಯವಿಲ್ಲ. ಅದೇ ರೀತಿ ಸೃಷ್ಟಿ ಇರುವವರೆಗು ಪ್ರಥಮ, ಮಧ್ಯಮ, ಅಂತಿಮ ದೈವಗ್ರಂಥಗಳ ಸ್ಥಾನಗಳಲ್ಲಿ ಭಗವದ್ಗೀತೆ, ಇಂಜೀಲ್, ಖುರಾನ್‌ಗಳೆ ಶಾಶ್ವತವಾಗಿ ಇರುತ್ತವೆ.

ಅಂತಿಮ ದೈವಗ್ರಂಥವಾಗಿ ಯಾವಾಗಲೂ ಖುರಾನ್ ಇರುವುದು, ಆ ಸ್ಥಾನವು ಎಂದಿಗೂ ಬದಲಾಗುವುದಿಲ್ಲ. ದೇವರು ಹೇಳಿದ ತನ್ನ ಮೂರು ವಿಧಾನಗಳಲ್ಲಿ ಖುರಾನ್ ಜ್ಞಾನವನ್ನು ಕೊನೆಯದಾಗಿ ತೆರೆಹಿಂಬದಿಯಲ್ಲಿ

ಹೇಳಿರುವುದರಿಂದ **"ಅಂತಿಮ ದೈವ ಗ್ರಂಥವು"** ಎನ್ನುವ ಹೆಸರು ಖುರಾನ್‌ಗೆ ಬಂದಿದೆ ಎಂದು, ಈ ವಿಷಯವನ್ನು ಸಕ್ರಮವಾಗಿ ಮುಸ್ಲಿಮ್ ಸಮಾಜಕ್ಕೂ ಸಹ ತಿಳಿದಿಲ್ಲವೆಂದು ಹೇಳಬಹುದು. ಯಾರಾದರೂ ಹಿಂದೂಗಳಾಗಲಿ, ಕ್ರೈಸ್ತರಾಗಲಿ ಅಂತಿಮ ದೈವ ಗ್ರಂಥವೆಂದು ಖುರಾನ್‌ನನ್ನು ಏಕೆ ಕರೆಯುತ್ತಿದ್ದಾರೆಂದು ಪ್ರಶ್ನಿಸಿದರೆ ನಾವು ಹೇಳಿದ ಉತ್ತರ ಸರಿಹೋಗುವುದು. ನಾನು ಹೇಳಿದಂತಲ್ಲದೇ ಏನು ಹೇಳಿದರೂ, ಹೇಗೆ ಹೇಳಿದರೂ ಅದು ಶಾಸ್ತ್ರಬದ್ಧವಾದ ಉತ್ತರವಲ್ಲ. ಪುನಃ ಪ್ರಶ್ನೆ ಬರಬಹುದು. ಆದ್ದರಿಂದ ದ್ವಿತೀಯ ದೈವ ಗ್ರಂಥದಲ್ಲಿ **"ನಿನಗೆ ನಿನ್ನ ವಿರೋಧಿ ಕೇಳಿದ ಪ್ರಶ್ನೆಗೆ ಎದುರಾಡದ (ಸಂಪೂರ್ಣವಾದ) ಜ್ಞಾನವನ್ನು ತಿಳಿಸುತ್ತೇನೆ"** ಎಂದು ಹೇಳಿದಂತೆ ದೇವರು ಖುರಾನ್‌ನನ್ನು ಅಂತಿಮ ದೈವಗ್ರಂಥವೆಂದು ಹೇಳುವುದಕ್ಕೆ ಎದುರಾಡದ ಜ್ಞಾನವನ್ನು ತಿಳಿಸಿದ್ದಾನೆಂದು ನಂಬುತ್ತಿದ್ದೇವೆ.

ದೇವರು ಮನುಷ್ಯರಿಗೆ ಮೂರು ವಿಧಗಳ ತನ್ನ ಜ್ಞಾನವನ್ನು ತಿಳಿಸುತ್ತೇನೆಂದು ಹೇಳಿದ ವಿಧಾನಗಳಲ್ಲಿ ಪ್ರಥಮವಾಗಿ ವಾಣಿಯಿಂದ ಹೇಳಿದ ಜ್ಞಾನವು ಭಗವದ್ಗೀತೆ ಎನ್ನುವ ಗ್ರಂಥವಾಗಿದೆ. ಪ್ರಥಮವಾಗಿ ಹೇಳಿದ ವಿಧಾನದಲ್ಲಿನ ಜ್ಞಾನವಾಗಿರುವದರಿಂದ ಭಗವದ್ಗೀತೆಯನ್ನು ಪ್ರಥಮ ದೈವ ಗ್ರಂಥವಾಗಿ ಹೇಳುತ್ತಿದ್ದೇವೆ. ಭಗವದ್ಗೀತೆ ಜ್ಞಾನವನ್ನು ಮೊದಲು ಆಕಾಶವಾಣಿಯೇ ಹೇಳಿದೆ, ಅದನ್ನು ಸೂರ್ಯನು ಭೂಮಿಯಮೇಲೆ ಮನುಷ್ಯರಿಗೆ, ಆಗ ಮನುಷ್ಯರು ಮಾತನಾಡುವ ಭಾಷೆಯಲ್ಲೇ ಹೇಳಿದ್ದಾನೆ. ಇದು ಕೃತಯುಗದಲ್ಲಿ ನಡೆದಿರುವ ಸಮಾಚಾರವು. ಕೃತಯುಗದಲ್ಲಿ ವಾಣಿಯಿಂದ ಬಂದಿರುವ ಜ್ಞಾನವನ್ನು ಮೂರು ಯುಗಗಳು ಕಳೆದ ನಂತರ ದ್ವಾಪರ ಯುಗದ ಕೊನೆಯಲ್ಲಿ ಕೃಷ್ಣನು ಭಾರತ ದೇಶದಲ್ಲಿ ಹಿಂದಿ ಭಾಷೆಯಲ್ಲಿ ಅರ್ಜುನನಿಗೆ ಹೇಳಿದ್ದಾನೆ ಅದೇ ಜ್ಞಾನವನ್ನೇ ವ್ಯಾಸನು ಸಂಸ್ಕೃತದಲ್ಲಿ ಬರೆದು ಗ್ರಂಥವಾಗಿ ಮಾಡಿದ್ದಾನೆ. ಆ ಗ್ರಂಥವನ್ನೇ ಪ್ರಥಮ ದೈವಗ್ರಂಥವಾಗಿ ಹೇಳುತ್ತಿದ್ದೇವೆ. ಪ್ರಥಮ ದೈವ ಗ್ರಂಥವು ಬರೆದಿರುವುದು ಸಂಸ್ಕೃತದಲ್ಲಿ ಕೃಷ್ಣನು ಹೇಳಿರುವುದು ಹಿಂದಿ ಭಾಷೆಯಲ್ಲಿ, ಮೊದಲು ಆಕಾಶವು

ಹೇಳಿರುವುದು ಯಾವ ಭಾಷೆಯಲ್ಲಿ ಎನ್ನುವ ಪ್ರಶ್ನೆಯು ಮೊದಲೇ ಪ್ರಶ್ನಿಸಿಕೊಂಡಿದ್ದೇವೆ ಈಗ ಆ ಪ್ರಶ್ನೆಗೆ ಪೂರ್ತಿ ಉತ್ತರವನ್ನು ತಿಳಿದುಕೊಳ್ಳೋಣ. ಇಲ್ಲಿಯವರಿಗೂ ಆಕಾಶವಾಣಿ ಹೇಳಿದೆ ಎಂದರೆ ಎಲ್ಲರು ತಲೆ ಆಡಿಸಿ ಕೇಳುತ್ತಿದ್ದೇವೆ. ಆದರೆ ಆಕಾಶವು ಯಾವ ಭಾಷೆಯಲ್ಲಿ ಹೇಳಿದೆ ಎನ್ನುವ ಪ್ರಶ್ನೆ ಯಾರಿಗೂ ಬರಲಿಲ್ಲ. ಈಗ ಬಂದಿದೆ ಆದ್ದರಿಂದ ಈಗ ಉತ್ತರವನ್ನು ನೋಡೋಣ.

ದೇವರು ನೇರವಾಗಿ ಯಾರ ಹತ್ತಿರ ಮಾತನಾಡುವುದಿಲ್ಲ, ಆದ್ದರಿಂದ ಆತನು ಮನುಷ್ಯರಿಗೆ ಜ್ಞಾನವನ್ನು ತಿಳಿಸುವುದಕ್ಕೆ ಮೂರು ವಿಧಾನಗಳನ್ನು ಆಯ್ಕೆ ಮಾಡಿಕೊಂಡಿದ್ದಾನೆ. ಮೂರು ವಿಧಾನಗಳಿಂದ ತನ್ನ ಜ್ಞಾನವನ್ನು ಮನುಷ್ಯರಿಗೆ ತಿಳಿಸಿದ್ದಾನೆ. ಆದರೆ ಆಕಾಶವು ಒಂದೇ ಸಲವೇ ಹೇಳಲಾಗುವುದು ಎಂದಾಗಲಿ ತನ್ನ ಪ್ರತಿನಿಧಿ ಒಂದೇ ಸಲ ಹೇಳುತ್ತಾನೆಂದಾಗಲಿ ತೆರೆಹಿಂಬದಿ ಯಿಂದ ಒಂದು ಸಲವೇ ಹೇಳುತ್ತಾನೆಂದಾಗಲಿ ಹೇಳಲಿಲ್ಲ. ಪ್ರಜೆಗಳಲ್ಲಿ ಅಜ್ಞಾನವು ಯಾವಾಗಿದ್ದರು ಈ ಮೂರು ವಿಧಾನಗಳಿಂದ ಆಗಾಗ ಜ್ಞಾನವನ್ನು ತಿಳಸಲಾಗುವುದು. ತೆರೆಯ ಹಿಂಭಾಗದಿಂದ ಜ್ಞಾನವನ್ನು ತಿಳಿಸಿರುವ ವಿಧಾನವು ಒಂದೇ ಆದರೂ, ಆ ವಿಧಾನದ ಪ್ರಕಾರ ಈಗಲೂ, ನಮಗೆ ತಿಳಿದು ಎರಡು ಸಲ ಜ್ಞಾನವನ್ನು ಹೇಳಲಾಗಿದೆ. ಹಾಗೆಯೇ ತನ್ನ ಪ್ರತಿನಿಧಿಯಿಂದ ಜ್ಞಾನವನ್ನು ತಿಳಿಸುತ್ತೇನೆಂದು ಹೇಳಿದ ಪ್ರಕಾರವು, ಇಂದಿಗೆ ಎರಡು ಸಲ ತಿಳಿಸಿರುವುದಾಗಿ ಆಧಾರವು ಇದೆ, ಇನ್ನೊಂದು ಕಡೆ ಆಕಾಶವು ವಾಣಿಯಿಂದ ತಿಳಿಸುತ್ತಿದ್ದೇನೆನ್ನುವ ವಿಧಾನದ ಪ್ರಕಾರ ಒಂದು, ಎರಡು, ಮೂರು ಸಲ ಅಲ್ಲದೆ ಅನೇಕ ಸಲ ತಿಳಿಸಿರುವುದಾಗಿದೆ. ಈನನ್ನ ಮಾತು ಕೇಳಿದ ಕೆಲವರು ಆಕಾಶವು ಯಾವಾಗ ತಿಳಿಸಿದೆ ಯಾವ ಭಾಷೆಯಲ್ಲಿ ತಿಳಿಸಿದೆ? ಎಂದು ಪ್ರಶ್ನಿಸಬಹುದು ಅದಕ್ಕೆ ನನ್ನ ಉತ್ತರ ಈ ರೀತಿಯಾಗಿ ಇದೆ.

ದೇವರು ತಯಾರು ಮಾಡಿದ ಸೃಷ್ಟಿಯಲ್ಲಿ ಮೊದಲನೆಯದು ಪ್ರಕೃತಿ. ಸತ್ಯವನ್ನು ಹೇಳಬೇಕೆಂದರೆ ದೇವರು ಸೃಷ್ಟಿಸಿರುವುದು ಪ್ರಕೃತಿ ಅಲ್ಲ. ದೇವರಿಂದ

ಬೇರೆಯಾಗಿ ಹೋರಗೆ ಬಂದು ಕಾಣಿಸುವುದು ಪ್ರಕೃತಿ. ಪ್ರಕೃತಿ ದೇವರಿಂದ ಬಂದಿರುವ ನಂತರ ದೈವವು ಸಹ ಮೂರು ಭಾಗಗಳಾಗಿ ತಯಾರಾಗಿದ್ದಾನೆ. ಇದೆಲ್ಲ ಗಮನಿಸಿದರೆ ದೇವರು ಒಟ್ಟಿನಲ್ಲಿ ನಾಲ್ಕು ಭಾಗಗಳಾಗಿ ಇದ್ದಾನೆಂದು ತಿಳಿಯುತ್ತಿದೆ. ದೇವರು ದೇವರಾಗಿಯೇ ಇದ್ದು ಪ್ರಕೃತಿಯಾಗಿ, ಪರಮಾತ್ಮವಾಗಿ, ಆತ್ಮವಾಗಿ, ಜೀವಾತ್ಮವಾಗಿ ಇದ್ದಾನೆ. ನಾಲ್ಕು ಭಾಗಗಳಾಗಿ ಇದ್ದರೂ ನಾಲ್ಕು ಆತನಾಗಿಯೇ ಇದ್ದಾನೆಂದು ಹೇಳಬಹುದು. ಆದರೆ ಪ್ರಕೃತಿಯನ್ನು ನೋಡಬಹುದಾಗಲಿ, ಪರಮಾತ್ಮವನ್ನು ನೋಡಲಾಗದು. ಅಂದರೆ ದೇವರನ್ನು ಯಾರೂ ನೋಡಲಾಗದು. ದೇವರಿಗೆ ರೂಪ, ನಾಮ, ಕ್ರಿಯೆಗಳು ಇಲ್ಲ, ಅದ್ದರಿಂದ ದೇವರು ಕಾಣಿಸುವವನು ಅಲ್ಲ, ಮಾತನಾಡುವವನು ಅಲ್ಲ, ಕೆಲಸ ಮಾಡುವವನು ಅಲ್ಲ, ದೇವರು ಏನು ಸಂಕಲ್ಪಿಸಿಕೊಂಡರೂ ತನ್ನ ಪ್ರಕೃತಿಯೇ ಎಲ್ಲ ಮಾಡಿಕೊಡುವುದು. ಪ್ರಕೃತಿ – ಪರಮಾತ್ಮವಾಗಿ ಇದ್ದ ಎರಡನ್ನು ಮಾಯೆ– ದೇವರು ಎಂದು ಹೇಳಬಹುದು. ದೇವರು, ಆತ್ಮ, ಜೀವತ್ಮವಾಗಿ ಇದ್ದಂತೆ, ಪ್ರಕೃತಿ ಮಾಯೆಯಾಗಿ ಸಹ ಇದೆ. ಪ್ರಕೃತಿ – ಪರಮಾತ್ಮ ಅಥವಾ ಮಾಯೆ– ದೇವರು ಇಬ್ಬರು ಬೇರೆಯಾಗಿದ್ದರೂ ಇಬ್ಬರೂ ಸೇರಿ ಒಂದೇ ಎಂದು ಹೇಳಬಹುದು. ಸೃಷ್ಟಿಗೊಸ್ಕರ ಪರಮಾತ್ಮ ಪ್ರಕೃತಿಯನ್ನು ತನ್ನಿಂದ ಬೇರ್ಪಡಿಸಿ ಕಾಣಿಸುವಂತೆ ಇಟ್ಟಿದ್ದಾನೆ. ದೇವರಿಂದ ಹೊರಗೆ ಬಂದಿರುವ ಪ್ರಕೃತಿ, ಶರೀರದ ಹೊರಗೆ ಐದು ಭಾಗಗಳಾಗಿ ಶರೀರದ ಒಳಗೆ ಮೂರು ಭಾಗಗಳಾಗಿದೆ. ಶರೀರದ ಒಳಗೆ ಮಾಯೆ ಮೂರು ಗುಣಗಳ ರೂಪಗಳಾಗಿದ್ದು, ಶರೀರದ ಹೊರಗೆ ಪ್ರಕೃತಿ ಐದು ಭಾಗಗಳಾಗಿದೆ. ಪ್ರಕೃತಿಯ ಐದು ಭಾಗಗಳು ಕ್ರಮವಾಗಿ ಹೀಗೆ ಇವೆ. 1) ಆಕಾಶ, 2) ಗಾಳಿ, 3) ಅಗ್ನಿ, 4) ನೀರು, 5) ಭೂಮಿ. ಈ ಐದು ಭಾಗಗಳಾಗಿರುವ ಪ್ರಕೃತಿಯಲ್ಲಿ ಒಂದೊಂದು ಭಾಗವು ಒಂದೊಂದು ಶಕ್ತಿಯನ್ನು ಹೊಂದಿವೆ.

ಪ್ರಕೃತಿ ಎಂದರೆ 'ಮುಖ್ಯವಾಗಿ ಮಾಡಲ್ಪಟ್ಟಿರುವುದು' ಎನ್ನುವ ಅರ್ಥವಿದೆ. ಕೃತಿ ಎಂದರೆ ಮಾಡಲ್ಪಟ್ಟಿರುವುದೆಂದು ಅರ್ಥವಿದೆ. 'ಪ್ರ' ಎಂದರೆ

ಮುಖ್ಯವಾದದ್ದು ಎಂದು ಅರ್ಥ. ದೇವರ ಕೈಯಿಂದ ಮುಖ್ಯವಾಗಿ ಮಾಡಿರುವುದನ್ನು ಪ್ರಕೃತಿಯೆಂದು ಹೇಳಬಹುದು. ಪ್ರಕೃತಿಯನ್ನು ಮಾಡಿದ ದೇವರು ಕಾಣಿಸುವುದಿಲ್ಲ, ಆದರೆ ದೇವರ ಕೈಯಿಂದ ಮಾಡಲಾಗಿರುವ ಪ್ರಕೃತಿ ಕಾಣಿಸುತ್ತದೆ. ದೇವರು ಅಗೋಚರನು, ಪ್ರಕೃತಿ ಗೋಚರವಾಗಿದೆ. ಪ್ರಕೃತಿಯಲ್ಲಿ ಭಾಗಗಳಾಗಿರುವ ಭೂಮಿ ಕಾಣಿಸುತ್ತಿದೆ. ಹಾಗೆಯೇ ನೀರು, ಅಗ್ನಿ ಕಾಣಿಸುತ್ತಿವೆ. ಎರಡನೆಯದಾದ ಗಾಳಿ ಕಾಣಿಸುವುದಿಲ್ಲವೆಂದು ಎಲ್ಲರೂ ಹೇಳಬಹುದು ಆದರೆ ಮರು ಭೂಮಿಯಲ್ಲಿ ತೀವ್ರವಾದ ಬಿಸಿಲು ಇದ್ದಾಗ ಗಾಳಿಯೂ ಸಹ ಕಾಣಿಸುತ್ತದೆ. ಇನ್ನು ಮತ್ತೊಂದು ಆಕಾಶವು ಕಾಣಿಸದೆಂದು, ಗಗನವು ಶೂನ್ಯವೆಂದು ಹೇಳುತ್ತಿರುತ್ತೇವೆ. ಗಗನವು ಶೂನ್ಯವು ಅಲ್ಲವೆಂದು ಹೇಳಲಾಗುವುದಿಲ್ಲ, ಆಕಾಶವು ಸಹ ಕಾಣಿಸುತ್ತಿದೆಯೆಂದೇ ಹೇಳುತ್ತಿದ್ದೇವೆ. ಪ್ರಕೃತಿ ಕಾಣಿಸುವುದು ಎನ್ನುವಾಗ ಆಕಾಶವು ಸಹ ಕಾಣಿಸುತ್ತಿದೆಯೆಂದೇ ಹೇಳಬೇಕು. ಮನುಷ್ಯರೆಲ್ಲರೂ ಆಕಾಶವು ಕಾಣಿಸದು ಎಂದರು, ನಾವು ಮಾತ್ರ ಆಕಾಶವು ಕಾಣಿಸುತ್ತಿದೆಯೆಂದು ಹೇಳುತ್ತಿದ್ದೇವೆ. ಹೇಗೆ ಕಾಣಿಸುತ್ತಿದೆ ಎನ್ನುವ ಪ್ರಶ್ನೆಗೆ ಈ ರೀತಿಯಾಗಿ ಉತ್ತರವಿದೆ ನೋಡಿರಿ.

ಆಕಾಶವು ಮೇಘರೂಪವಾಗಿ ಕಾಣಿಸುತ್ತಿದೆ. ಮೇಘಗಳು ಆಕಾಶದಲ್ಲಿನ ಭಾಗಗಳೇ. ರೂಪವಿಲ್ಲದ ಆಕಾಶವು ತನ್ನ ರೂಪವನ್ನು ಮೇಘಗಳ ರೂಪಗಳಲ್ಲಿ ಚಿತ್ರ ವಿಚಿತ್ರವಾಗಿ ತೋರಿಸುತ್ತದೆ. "ಪ್ರಕೃತಿ ಕೆಲಸ ಮಾಡುವುದು" ಎಂದು ದೇವರು ಹೇಳಿದಾಗ ಪ್ರಕೃತಿಯಲ್ಲಿನ ಭಾಗವಾಗಿರುವ ಆಕಾಶವೂ ಸಹ ಕೆಲಸ ಮಾಡುವುದಾಗಿಯೇ ಇರುತ್ತದೆ. ಆಕಾಶವು ಶೂನ್ಯವಾಗಿರುವಾಗ ಕೆಲಸಮಾಡುವು ದಕ್ಕೆ ಸಾಧ್ಯವಿಲ್ಲ. ಆದ್ದರಿಂದ ಆಕಾಶವು ಮೇಘ ರೂಪವಾಗಿ ಕೆಲಸಮಾಡುವಂತೆ ಆಕಾಶವನ್ನು ದೇವರು ನಿರ್ಮಿಸಿದ್ದಾನೆ. ಆಕಾಶವು ಒಂದು ಭೂತವಾಗಿದ್ದು ಉಳಿದ ನಾಲ್ಕು ಪ್ರಕೃತಿ ಭೂತಗಳಿಗಿಂತ ದೊಡ್ಡದಾಗಿದೆ. ಉಳಿದ ಗಾಳಿ, ಅಗ್ನಿ, ನೀರು, ಭೂಮಿ ಎನ್ನುವ ನಾಲ್ಕು ಭೂತಗಳು ಮಾಡುವ ಕೆಲಸಗಳಿಗಿಂತ ಹೆಚ್ಚಿನ ಕೆಲಸ ಆಕಾಶವು ಮಾಡುತ್ತಿದೆ. ಆಕಾಶ ಹೆಚ್ಚಿನ ಕೆಲಸ ಮಾಡುವುದಕ್ಕೆ

ತನ್ನ ರೂಪವನ್ನು ಮೇಘಗಳಾಗಿ ಬದಲಾಯಿಸಿಕೊಂಡು, ಮೇಘಗಳ ರೂಪದಲ್ಲಿ ಉಳಿದ ಭೂತಗಳಿಗಿಂತ ಹೆಚ್ಚಿನ ಕೆಲಸ ಮಾಡುತ್ತಿವೆ. ಈಗ ಆಕಾಶವು ಕೆಲಸ ಮಾಡುವುದೆಂದು ತಿಳಿದುಹೋಗಿದೆ. ಆಕಾಶವು ಅನೇಕ ಕೆಲಸಗಳು ಮಾಡುತ್ತಿರುವಂತೆ ಇದಕ್ಕೆ ಮೊದಲೆ ಒಂದು ಸಲ ಹೇಳಿದ್ದೇವೆ. ಮೇಘಗಳು ಯಾರಿಗೂ ತಿಳಿಯದ ಅದ್ಭುತವಾದ ಕೆಲಸಗಳನ್ನು ಮಾಡುತ್ತಿವೆ ಯೆಂದು ಅನೇಕ ಗ್ರಂಥಗಳಲ್ಲಿ ಬರೆದಿರುವುದು ನಡೆದಿದೆ. ಮೇಘಗಳು ಕೆಲಸ ಮಾಡುತ್ತಿವೆಯೆಂದರೆ ಆಕಾಶವು ಕೆಲಸ ಮಾಡುತ್ತಿದೆಯೆಂದೇ ತಿಳಿಯಬೇಕು.

ಆಕಾಶವು ಮೇಘರೂಪದಲ್ಲಿ ಮನುಷ್ಯರಿಗೆ ತಿಳಿಯದ ಎಷ್ಟೋ ಕೆಲಸಗಳನ್ನು ಮಾಡುತ್ತಿರುವ ಮಾತು ದೊಡ್ಡ ರಹಸ್ಯವೇ ಆದರೂ, ಆ ರಹಸ್ಯವನ್ನು ಬಹಳ ಸುಲಭವಾಗಿ ವಿವರಿಸಿ ಬರೆದಿರುವುದು, ಪರಿಪೂರ್ಣವಾಗಿ ಹೇಳಿರುವುದು ನಡೆದಿದೆ. ಮೇಘದಿಂದ ಮಳೆಯೂ ಬರುತ್ತಿದೆ. ಮಳೆಯು ಬಂದಾಗಲೆಲ್ಲಾ ಮೇಘವು ಗುಡುಗುವುದಿಲ್ಲ. ಕೆಲವು ಸಮಯಗಳಲ್ಲಿ ಮಾತ್ರವೇ ಅಂದರೇ ಬೇಸಿಗೆಯ ಕಾಲದ ನಂತರ ಬರುವ ಮೊದಲ ಮಳೆಯು ಸುರಿಯುವ ಸಮಯದಲ್ಲಿ ಮೇಘಗಳು ಗುಡುಗುಗಳ ರೂಪದಲ್ಲಿ ದೊಡ್ಡ ದೊಡ್ಡ ಶಬ್ದಗಳನ್ನು ಮಾಡುತ್ತಿರುತ್ತವೆ. ಮೇಘಗಳು ಗುಡುಗುಂಟುಮಾಡುವಾಗ ಆಗಾಗ ಮಿಂಚುಗಳು ಸಹ ಬರುತ್ತವೆ. ಮಿಂಚುಗಳ ಜೊತೆಗೆ ಆಕಾಶದಿಂದ ಸಿಡಿಲುಗಳು ಸಹ ಬೀಳುತ್ತಿರುತ್ತವೆ. ಮಳೆಯು ಸುರಿಯುವುದು, ಗುಡುಗುಗಳು ಗುಡುಗುವುದು, ಮಿಂಚುಗಳು ಮಿಂಚುವುದು, ಸಿಡಿಲು ಬೀಳುವುದು ಇವೆಲ್ಲಾ ಕೆಲಸಗಳು ಆಕಾಶದಿಂದಲೇ ನಡೆಯುತ್ತಿವೆಯೆಂದು ಹೇಳಬಹುದು. ಮಳೆಯು ಬರುವುದರಿಂದ ಸಮಸ್ತ ಪ್ರಾಣಿಗಳಿಗೂ ಅವಶ್ಯವಾದ ನೀರು ದೊರೆಯುತ್ತಿದೆ. ಇದನ್ನನುಸರಿಸಿ ಸಮಸ್ತ ಪ್ರಾಣಿಗಳಿಗೂ ಜೀವನಾಧಾರವಾದ ಮಳೆಯ ನೀರನ್ನು ಆಕಾಶವು ಮೇಘರೂಪದಲ್ಲಿ ಕೊಡುತ್ತಿದೆಯೆಂದು ತಿಳಿಯುತ್ತದೆ. ಇದೆಲ್ಲವು ಮೇಘಗಳಿಂದ ನಡೆಯುತ್ತಿದೆಯೆಂದು ಎಲ್ಲರಿಗೂ ತಿಳಿದಿದೆ ಆದರೂ, ಅದೆಲ್ಲವೂ ಆಕಾಶದ ಕೆಲಸವೇ ಎಂದು ಯಾರಿಗೂ ತಿಳಿಯದು. ಆಕಾಶವು ಮೇಘಗಳು

ಬೇರೆ ಬೇರೆ ಎಂದು ತಿಳಿದುಕೊಳ್ಳುತ್ತಿದ್ದಾರೆ ಹೊರತು ಮೇಘಗಳು ಸಹ ಆಕಾಶದಲ್ಲಿನ ಭಾಗವೇ ಎಂದು ಕೆಲವರಿಗಾದರೂ ಸಹ ತಿಳಿದಿಲ್ಲ.

ಆಕಾಶವು ಮೇಘಗಳ ರೂಪದಲ್ಲಿ ಎಷ್ಟೋ ಕೆಲಸಗಳನ್ನು ಮಾಡುತ್ತಿದೆ. ಮೇಘಗಳು ಮಾಡುವ ಕೆಲವು ಕೆಲಸಗಳೇ ಮನುಷ್ಯರಿಗೆ ತಿಳಿದಿವೆ. ಬಹಳ ಕೆಲಸಗಳು ಮನುಷ್ಯರಿಗೆ ತಿಳಿದಿಲ್ಲ. ಭೂಮಿಯ ಮೇಲೆ ಒಂದು ಹೊಸ ರೋಗ ಬರಬೇಕೆಂದರೆ ಎಲ್ಲಿ ಇಲ್ಲದ ಆ ರೋಗವನ್ನು ಮೇಘವೇ ಆಕಾಶದಿಂದ ತಂದು ಬಿಡುವುದು. ಹೊಸ ರೋಗವು ಬಂದಿದೆಯೆಂದರೆ ಅದು ಆಕಾಶದಲ್ಲಿನ ಭಾಗವಾದ ಮೇಘದ ಕೆಲಸವೆಂದು ಮನುಷ್ಯರಿಗೆ ಯಾವ ಮಾತ್ರವೂ ತಿಳಿದಿಲ್ಲ. ಮೇಘವು ಆಕಾಶವೊಂದರ ಇನ್ನೊಂದು ಪ್ರತಿರೂಪವೆಂದು ಸಹ ಬಹಳ ಜನರಿಗೆ ತಿಳಿದಿಲ್ಲ. ಆಕಾಶವು ಯಾವಾಗ ಮೇಘವಾಗಿ ಬದಲಾಗುತ್ತದೆ ಎನ್ನುವ ವಿಷಯವು ಭೂಮಿಯ ಮೇಲೆ ಯಾರಿಗೂ ತಿಳಿದಿಲ್ಲ. ಪ್ರಥಮ ದೈವ ಗ್ರಂಥವಾದ ಭಗವದ್ಗೀತೆಯಲ್ಲಿ **"ಸೃಷ್ಟಿ ಆದಿಯಲ್ಲಿ ಜ್ಞಾನವನ್ನು ನಾನು ಸೂರ್ಯನಿಗೆ ಹೇಳಿದ್ದೇನೆ."** ಎಂದು ಜ್ಞಾನ ಯೋಗದ ಮೊದಲ ಶ್ಲೋಕದಲ್ಲೇ ದೇವರು ಹೇಳಿದ್ದಾನೆ. ಅಂತಿಮ ದೈವ ಗ್ರಂಥವಾದ ಖುರಾನ್ ಗ್ರಂಥದಲ್ಲಿ ವಹೀ ಯಿಂದ ಹೇಳುವುದೂ, ದೇವರು ತಿಳಿಸಿರುವ ಮೂರು ವಿಧಾನಗಳಲ್ಲಿಯೂ ಒಂದೇ ಇದೆ. ವಹೀಯಿಂದ (ಆಕಾಶವಾಣಿಯಿಂದ) ತಿಳಿಸುವುದಾಗಿ ಹೇಳಿದ ವಿಷಯವು ಸೃಷ್ಟಿ ಆದಿಯಲ್ಲೇ ನೆರವೇರಿದೆಯೆಂದು ನಮಗೆ ತಿಳಿದಿದೆ.

ಆಕಾಶವು ಪ್ರಪಂಚ ಸಂಬಂಧ ಅನೇಕ ಕಾರ್ಯಗಳನ್ನು ಮೇಘಗಳ ರೂಪದಲ್ಲಿ ಮಾಡುತ್ತಿದೆಯೆಂದು ತಿಳಿದುಹೋಗಿದೆ. ಅಷ್ಟೇ ಅಲ್ಲದೆ ಆಕಾಶವು ದೈವಜ್ಞಾನವನ್ನು ಪ್ರಜೆಗಳಿಗೆ ತನ್ನ ವಾಣಿ ರೂಪದಲ್ಲಿ ತಿಳಿಸಿದೆಯೆಂದು ಭಗವದ್ಗೀತೆಯಲ್ಲೂ, ಖುರಾನ್ ಗ್ರಂಥದಲ್ಲೂ ಕೇಳಿದ್ದೇವೆ ಹೊರತು ಆ ಕೆಲಸ ಹೇಗೆ ನಡೆಯುತ್ತಿದೆಯೋ ಯಾರಿಗೂ ತಿಳಿಯದು. ತಿಳಿದುಕೊಳ್ಳಬೇಕೆನ್ನುವ ಆಲೋಚನೆಯೂ ಸಹ ಯಾರಿಗೂ ಬಂದಿಲ್ಲ. ಈಗ ನಾವು ಕೇಳದಿದ್ದರೂ ದೇವರೆ ಆ ವಿಷಯವನ್ನು ಪ್ರಸ್ತಾವನೆಗೆ ತಂದು ಹೇಳಿದಂತಿದೆ. ಆಕಾಶವು

ಮೇಘಗಳ ರೂಪದಲ್ಲಿ ತಯಾರಾಗಿ ಸೃಷ್ಟಿ ಆದಿಯಲ್ಲಿ ಗುಡುಗಿ ಶಬ್ದವನ್ನು ಮಾಡಿದೆ. ಈ ಕಾಲದಲ್ಲಿ ಮೇಘಗಳ ಗುಡುಗುಗಳು ಹೇಗೆ ಬರುತ್ತಿವೆಯೋ ಹಾಗೆಯೇ ಪೂರ್ವದಲ್ಲಿಯೂ ಸಹ ಬಂದಿವೆ. 'ಒಂದು ಗುಡುಗೆ ಅಲ್ಲದೆ ಮಿಂಚುಗಳು, ಸಿಡಿಲುಗಳು ಮೂರು ಬಂದಿವೆ. ಮಿಂಚುಗಳು ಇಂದಿನ ಕಾಲದಲ್ಲಿ ಹೇಗೆ ಇವೆಯೋ ಹಾಗೆಯೇ ಆಗಲೂ ಸಹ ಬಂದಿವೆ. ಅದೇ ರೀತಿ ಇಂದಿನ ಕಾಲದಲ್ಲಿ ಸಿಡಿಲುಗಳು ಹೇಗೆ ಬಂದಿವೆಯೋ ಹಾಗೆಯೇ ಆಗಲೂ ಸಹ ಬಂದಿವೆ. ಆದರೆ ಗುಡುಗುಗಳು ಮಾತ್ರ ಇತ್ತೀಚೆಗಿಂತ ಆಗ ಸ್ವಲ್ಪ ವ್ಯತ್ಯಾಸದಿಂದ ಬಂದಿವೆ. ಈಗಿನಂತೆ ಆಗಲೂ ಸಹ ಶಬ್ದದಿಂದ ಕೂಡಿಕೊಂಡ ಗುಡುಗುಗಳೇ ಬಂದಿವೆ ಹೊರತು ಶಬ್ದಗಳಲ್ಲಿ ಮಾತ್ರ ಸ್ವಲ್ಪ ವ್ಯತ್ಯಾಸವಿದೆಯೆಂದೇ ಹೇಳಬಹುದು. ಈಗಿನ ಕಾಲದಲ್ಲಿಯೂ ಸಹ ಗುಡುಗುಗಳು, ಮಿಂಚುಗಳು, ಸಿಡಿಲುಗಳು ಮೂರು ಬರುತ್ತಿದ್ದರೂ ಮಿಂಚುಗಳಲ್ಲಿ, ಸಿಡಿಲುಗಳಲ್ಲಿ ಮಾತ್ರ ವ್ಯತ್ಯಾಸ ಕಾಣಿಸದು. ಆದರೆ ಗುಡುಗುಗಳಲ್ಲಿ ಮಾತ್ರ ಪ್ರತಿ ವರ್ಷವೂ ಸ್ವಲ್ಪ ವ್ಯತ್ಯಾಸದಿಂದ ಕಾಣಿಸುತ್ತಿರುತ್ತದೆ. ವ್ಯತ್ಯಾಸಗಳಿಲ್ಲದ ಗುಡುಗುಗಳು ಇರುವುದಿಲ್ಲ.

ಪ್ರತಿ ಗುಡುಗು ಆಕಾಶವೊಂದರ ಶಬ್ದವೇ, ಅಂದರೆ ಆಕಾಶವಾಣಿಯೇ. ಅದನ್ನೇ ಇನ್ನೊಂದು ಭಾಷೆಯಲ್ಲಿ 'ವಹೀ' ಎಂದಿದ್ದಾರೆ. ವಹೀ ಎಂದರೆ 'ಬಂದಿರುವ ಸಮಾಚಾರ' ಎಂದು ಅರ್ಥ. ವಾಣಿ ಎಂದರೆ ಸಮಾಚಾರದಿಂದ ಕೂಡಿಕೊಂಡ ಶಬ್ದವು ಎಂದು ಅರ್ಥ. ಗುಡುಗು ಎಂದರೆ 'ಗದ್ದಲಿಸಿ ಹೇಳುವುದು' ಎನ್ನುವ ಅರ್ಥವಿದೆ. ಆಕಾಶವು ಗುಡುಗುವುದು ಪ್ರತಿ ವರ್ಷವು ನಾವು ಕೇಳುತ್ತಲೆ ಇದ್ದೇವೆ. ಆಕಾಶದಿಂದ ಬರುವ ಚಿಕ್ಕ ದೊಡ್ಡ ಪ್ರತಿ ಶಬ್ದವು ಜ್ಞಾನದಿಂದ ಕೂಡಿಕೊಂಡಿದೆಯೆಂದು ಅದು ನನಗೆ ಬಿಟ್ಟು ನಿಮಗೆ ತಿಳಿಯದೆಂದು, ಸೂರ್ಯನು ಆತನು ಕೇಳಿದ ಸಮಾಚಾರವನ್ನು ಭೂಮಿಯವರೆಗೂ ಹೊತ್ತುಕೊಂಡು ಬಂದು ಮನುಷ್ಯರಿಗೆ ಹೇಳಿರುವುದಾಗಿದೆ. ಸೂರ್ಯನು ಕೇಳಿರುವುದು ಸಹ ಆಕಾಶವೊಂದರ ಗುಡುಗುಗಳನ್ನೇ.

ಆಕಾಶವು ಅಂದಿನಿಂದ ಇಂದಿನವರೆಗೂ ಪ್ರತಿವರ್ಷವು ಒಂದು ಸಲವಾದರೂ ಗುಡುಗುತ್ತಿದೆ. ಆ ಗುಡುಗುಗಳನ್ನು ಯಾರೂ ಹಿಡಿಸಿಕೊಳ್ಳುತ್ತಿಲ್ಲ. ಗುಡುಗಿನ ಶಬ್ದವು ಹೇಗೆ ಬರುತ್ತಿದೆಯೋ ಕೆಲವರು ಹೇಳುತ್ತಿದ್ದಾರಾಗಲೀ, ಶಬ್ದದಲ್ಲಿರುವ ಅರ್ಥವನ್ನು ಯಾರೂ ಹೇಳುತ್ತಿಲ್ಲ. ಮಿಂಚು ಹಾಗೂ ಸಿಡಿಲು ಹೀಗೆ ಬರುತ್ತಿವೆಯೆಂದು ವಿವರಣೆ ಹೇಳುತ್ತಿದ್ದಾರೆ ಹೊರತು, ಆದರೆ ಅದರಲ್ಲಿ ಅಡಗಿರುವ ಅರ್ಥವನ್ನು ಹೇಳಲಾಗುತ್ತಿಲ್ಲ. ಸೃಷ್ಟಿ ಆದಿಯಲ್ಲಿಯೂ ಸಹ ಆಕಾಶದಿಂದ ಮೂರು ವಿಧಗಳ ಸ್ಪಂದನೆಗಳೇ ಬಂದಿವೆ. **1) ಗುಡುಗು, 2) ಮಿಂಚು, 3) ಸಿಡಿಲುಗಳು**. ಇಂದಿನ ಕಾಲದಲ್ಲಿಯೂ ಸಹ ಆಕಾಶದಿಂದ ಮೂರು ಸ್ಪಂದನೆಗಳೇ ಬರುತ್ತಿವೆ. ಆಕಾಶವು ನೇರವಾಗಿ ಮೂರು ಸ್ಪಂದನೆಗಳನ್ನು ಕಳುಹಿಸುತ್ತಿಲ್ಲ. ಆಕಾಶವು ಮೇಘಗಳ ಮೂಲಕ ತನ್ನ ಸ್ಪಂದನೆಯನ್ನು ಮಿಂಚು, ಗುಡುಗು, ಸಿಡಿಲುಗಳಿಂದ ತಿಳಿಸುತ್ತಿದೆ. ಮಿಂಚು, ಸಿಡಿಲು, ಗುಡುಗುಗಳು ಬಂದಾಗಲೆಲ್ಲ ಮಳೆ ಬರುತ್ತದೆನ್ನುವ ನಂಬಿಕೆಯಿಲ್ಲ. ಗುಡುಗು, ಮಿಂಚುಗಳು ಬಂದಾಗಲೆಲ್ಲ ಕೆಲವು ಸಲ ಮಳೆ ಬರಬಹುದು ಅಥವಾ ಬಾರದಂತೆಯೂ ಇರಬಹುದು. ಈಗ ಪ್ರತಿ ವರ್ಷ ಮೇಘಗಳು ಏನು ಮಾಡುತ್ತಿವೆಯೋ ಮೊದಲು ಸೃಷ್ಟಿ ಆದಿಯಲ್ಲಿಯೂ ಸಹ ಇದೇ ಕೆಲಸ ನಡೆದಿದೆ. ಈ ಕೆಲಸಗಳಲ್ಲಿನ ಅಂತರಾರ್ಥವನ್ನು ಸೂರ್ಯನು ಗ್ರಹಿಸಲ್ಪಟ್ಟಿದ್ದಾನೆ. ಅಷ್ಟೇ ಹೊರತು ಆಕಾಶ ಪ್ರತ್ಯೇಕವಾದ ಭಾಷೆಯಲ್ಲಿ ಪ್ರತ್ಯೇಕವಾದ ಜ್ಞಾನವೆಂದು ಹೆಸರಿಟ್ಟು ಹೇಳಲಿಲ್ಲ. ಆಕಾಶದಿಂದ ಬಂದಿರುವ ಶಬ್ದವನ್ನು ಗ್ರಹಿಸಿದ ಸೂರ್ಯನು ನಂತರ ಪ್ರಜೆಗಳಿಗೆ ತಿಳಿದ ಭಾಷೆಯಲ್ಲಿ ಹೇಳಿರುವುದು 'ಜ್ಞಾನವೆಂದು' ಹೆಸರಿಟ್ಟು ಹೇಳಿರುವುದು ನಡೆದಿದೆ. ಆಗ ಸೂರ್ಯನು ಹೇಳಿರುವುದೇ ಈದಿನ ಮೂರು ಗ್ರಂಥಗಳ ರೂಪವಾಗಿ ತಯಾರಾಗಿ ನಮ್ಮ ಮುಂದೆ ಇದೆ.

**ಪ್ರಶ್ನೆ :– ನೀವು ಮೂರು ಗ್ರಂಥಗಳ ಪ್ರಸ್ತಾಪ ತರುತ್ತಿದ್ದೀರ? ಮೊದಲೇ ಮುಸ್ಲಿಮರ ಗ್ರಂಥವಾದ ಖುರಾನ್‌ನಲ್ಲಿ 42–51 ನೇ ವಾಕ್ಯವನ್ನು ತೋರಿಸುತ್ತಾ ಅದರಲ್ಲಿ ದೇವರು ಹೀಗೆ ಹೇಳಿದ್ದಾನೆ ಎಂದು ಒಂದು ಆಯತ್‌ನ್ನು ಹೇಳಿದ್ದೀರಾ. ನೀವು**

**ಹಿಂದೂಗಳ ಜ್ಞಾನವನ್ನು ಬೋಧಿಸುತ್ತಿದ್ದೀರಾ? ಅಥವಾ ಮುಸ್ಲಿಮ್‌ರ ಜ್ಞಾನವನ್ನು ಬೋಧಿಸುತ್ತಿದ್ದೀರಾ? ನೀವು ಹಿಂದೂ ಸಮಾಜದಲ್ಲಿನ ವ್ಯಕ್ತಿ ಅಲ್ಲವೆ! ಹಾಗಿರುವಾಗ ಹಿಂದೂಗಳ ಜ್ಞಾನವನ್ನು ಹೇಳದೇ ಅನ್ಯ ಮತಗಳ ಜ್ಞಾನವನ್ನು ಏಕೆ ಹೇಳುತ್ತಿದ್ದೀರ?**

**ಉತ್ತರ :–** ಪ್ರಪಂಚವೆಲ್ಲದಕ್ಕೂ ಒಬ್ಬನೇ ದೇವರಿದ್ದಾನೆ, ಒಂದೇ ಜ್ಞಾನವಿದೆ. ಸೃಷ್ಟಿ ಆದಿಯಲ್ಲಿ ಸೃಷ್ಟಿಯನ್ನು ತಯಾರು ಮಾಡಿದವನು, ಜ್ಞಾನವನ್ನು ಹೇಳಿದವನು ಒಂದೇ ದೇವರೇ. ಅಂದಿಗೂ ಇಂದಿಗೂ ಒಬ್ಬನೇ ದೇವರು ಪ್ರಪಂಚಕ್ಕೆ ಅಧಿಪತಿಯಾಗಿ ಇದ್ದಾನೆ. ಸೃಷ್ಟಿ ಆದಿಯಲ್ಲಿ ಮತಗಳಿಲ್ಲ. ಮತಗಳು ಈ ಮಧ್ಯ ಕಾಲದಲ್ಲಿ ಕಲಿಯುಗದಲ್ಲಿ ಎರಡು ಸಾವಿರ ವರ್ಷಗಳಿಂದ ಬಂದಿವೆ. ಮತಗಳ ಪ್ರಸ್ತಾಪವು ಬಂದನಂತರ ಮನುಷ್ಯರಲ್ಲಿ ಅಜ್ಞಾನವು ವೇಗವಾಗಿ ಬೆಳೆದುಹೋಗಿದೆ. ನನಗೆ ಮತಗಳೊಂದಿಗೆ ಸಂಬಂಧವಿಲ್ಲ. ದೇವರನ್ನು ಪಥದೊಂದಿಗೆ ಸಂಬಂಧವಿರುವವನಾಗಿ ಹೇಳುತ್ತಿದ್ದೇನೆ. ಖುರಾನ್ ವಾಕ್ಯವಾದರೂ, ಭಗವದ್ಗೀತೆ ಶ್ಲೋಕವಾದರೂ ನನಗೆ ಎರಡೂ ಸಮಾನವೇ. ಏಕೆಂದರೆ! ದೇವರು ಸೃಷ್ಟಿ ಆದಿಯಲ್ಲಿ ಹೇಳಿದ ಜ್ಞಾನವನ್ನೇ ಮೊದಲು ಭಗವದ್ಗೀತೆಯಾಗಿ ಬರೆಯಲಾಗಿದೆ. ಅದೇ ಜ್ಞಾನವೇ ನಂತರ ಉಳಿದ ಎರಡು ಗ್ರಂಥಗಳಾಗಿ ಬರೆಯಲಾಗಿದೆ. ಅವಶ್ಯವನ್ನನುಸರಿಸಿ ನಿಮಗೆ ಜ್ಞಾನವನ್ನು ತಿಳಿಸುವಸಲುವಾಗಿ ದೇವರ ಜ್ಞಾನವನ್ನು ಮೂರು ಗ್ರಂಥಗಳಿಂದ ತೆಗೆದು ಹೇಳುತ್ತಿದ್ದೇನೆ ಹೊರತು ನನಗೆ ಇದು ನನ್ನ ಮತ, ಅದು ಪರರ ಮತ ಎನ್ನುವ ಧ್ಯಾಸವಿಲ್ಲ. ಮತಗಳೆಂದು ನೀನು ಹೆಸರು ಇಟ್ಟುಕೊಂಡರೂ, ನನ್ನ ಭಾವದಲ್ಲಿ ಅವು ಎಲ್ಲವೂ ದೇವರನ್ನು ಸೇರುವ ಮಾರ್ಗಗಳಾಗಿ ಎಂದರೆ, ಪಥಗಳಾಗಿ ಇವೆಯೆಂದು ನಾನು ತಿಳಿದುಕೊಳ್ಳುತ್ತಿದ್ದೇನೆ.

**ಪ್ರಶ್ನೆ :– ನೀವು ಹಿಂದೂ ಮತಸ್ಥರಾ ಅಲ್ಲವಾ! ಹೇಳಿರಿ?**

**ಉತ್ತರ :–** ನಿಮ್ಮ ಲೆಕ್ಕದಲ್ಲಿ ನಾನು ಹಿಂದೂ ಮತಸ್ಥನೇ! ಮತಗಳು ನಿನ್ನೆ ಮೊನ್ನೆ ಬಂದಿರುವವು. ಅದಕ್ಕೂ ಮೊದಲು ಹಿಂದೂಗಳಿದ್ದಾರೆ. ಆದರೆ ಆಗ ಹಿಂದೂಗಳನ್ನು ಹಿಂದೂ ಮತಸ್ಥರೆಂದು ಯಾರೂ ಕರೆಯುತ್ತಿರಲಿಲ್ಲ. ಏಕೆಂದರೆ!

ಆ ದಿನಗಳಲ್ಲಿ ಮತವೆನ್ನುವುದೇ ಇಲ್ಲ. ಆದ್ದರಿಂದ ಇಂತಹ ಮತಸ್ಥರೆನ್ನುವ ಪ್ರಸ್ಥಾಪವು ಬರಲಿಲ್ಲ. ಈ ದಿನದಲ್ಲಿ ಮನುಷ್ಯರ ಭಾವನೆಯ ಪ್ರಕಾರವಾದರೆ ನಾನು ಹಿಂದೂ ಮತಸ್ಥನು. ಪೂರ್ವವಿರುವ ಜ್ಞಾನದ ಪ್ರಕಾರವಾದರೆ ನಾನು ಹಿಂದೂ ಪಥದವನು. ನಾನು ಹೇಳುವ ಜ್ಞಾನದಲ್ಲಿ ಮತಗಳ ಭಾವ ಇರುವುದಿಲ್ಲ. ಪಥಗಳ ಭಾವವೇ ಇರುತ್ತದೆ. ಆದ್ದರಿಂದ ನಾನು ಹೇಳುವ ಬೋಧನೆಯು ಮತಗಳಿಗೆ ಅತೀತವಾದದ್ದು. ಆದ್ದರಿಂದ ನನ್ನನ್ನು ಮತಗಳೊಂದಿಗೆ ಜೋಡಿಸಬೇಡ ವೆಂದು ಮೊದಲೇ ಹೇಳುತ್ತಿದ್ದೇನೆ. ನಾನು ಹೇಳುವ ಜ್ಞಾನವನ್ನು ಕೇಳಿದರೇ ಮತಗಳ ಭಾವವು ನಿಮ್ಮಲ್ಲಿಯೂ ಸಹ ಇಲ್ಲದಂತೆ ಹೋಗುತ್ತದೆ. ದೇವರಿಗೆ ಮತ ಎನ್ನುವುದು ಇಷ್ಟವಿಲ್ಲ. ಆದ್ದರಿಂದ ದೈವಜ್ಞಾನದಲ್ಲಿ ಮತವನ್ನು ಅಡ್ಡವಿಡಬೇಡಿ.

ಮತವೆಂದರೇ ನಿನ್ನ ಇಷ್ಟದಿಂದ ಕೂಡಿಕೊಂಡಿರುವುದು. ನಿನ್ನ ಇಷ್ಟ ದೇವರ ಜ್ಞಾನದ ಹತ್ತಿರ ಇರಬಾರದು. ದೇವರ ಜ್ಞಾನದ ಹತ್ತಿರ ದೇವರ ಇಷ್ಟ ಇರಬೇಕೇ ಹೊರತು ನಮ್ಮ ಇಷ್ಟ ಇರಬಾರದು. ದೈವ ಮಾರ್ಗ ಎಂದಾಗ ಪಥ ಇರಬಹುದಾಗಲೀ ಮತ ಎನ್ನುವ ನಮ್ಮ ಇಷ್ಟ ಇರಬಾರದು. ಪಥ ಎಂದರೆ ಮಾರ್ಗ ಎಂದು ಅರ್ಥ. ದೇವರ ಮಾರ್ಗದ ಪ್ರಕಾರ ನಾವು ನಡೆಯಬೇಕು. ಮತ ಎಂದರೆ ನಮ್ಮ ಇಷ್ಟ. ದೇವರ ವಿಷಯದಲ್ಲಿ ನಮ್ಮ ಇಷ್ಟ ಬಂದಂತೆ ನಡೆಯದೆ ದೇವರ ಮಾರ್ಗದ ಪ್ರಕಾರ ನಡೆಯಬೇಕು. ಆದ್ದರಿಂದ ಮನುಷ್ಯ 'ಇಷ್ಟ' ಎನ್ನುವ ಪದವನ್ನು ಎಂದರೆ 'ಮತ' ಎನ್ನುವ ಪದವನ್ನು ದೇವರ ವಿಷಯದಲ್ಲಿ ಬಳಸಬೇಡವೆಂದು ಹೇಳುತ್ತಿದ್ದೇವೆ. ಮತ ಎನ್ನುವ ಪದವು ಪೂರ್ತಿಯಾಗಿ ಹಿಂದಿ ಪದ. ದೇಶ ಭಾಷೆಯಾಗಿ ಭಾರತದೇಶದಲ್ಲಿ ಕೃತ, ತ್ರೇತಾಯುಗಗಳಲ್ಲಿ ತೆಲುಗು ಭಾಷೆ ಇರುತ್ತಿತ್ತು. ಈ ದಿನ ತೆಲುಗು ಭಾಷೆ ಒಂದು ರಾಷ್ಟ್ರಕ್ಕೆ ಸೀಮಿತವಾಗಿ ಹೋಗಿದೆ. ತೆಲುಗು ಪದಗಳು ಉಳಿದ ಭಾಷೆಗಳಲ್ಲಿ ಬೆರೆತು ಹೋಗಿ ಅವು ಆ ಭಾಷಾ ಪದಗಳಾಗಿಯೇ ಹೇಳಲಾಗುತ್ತಿವೆ. ಮತ ಎನ್ನುವುದು ದ್ವಾಪರ ಯುಗಕ್ಕಿಂತ ಮೊದಲು ತೆಲುಗು ಪದವಾಗಿಯೇ ಇರುತ್ತಿತ್ತು.

ಆದರೆ ಕಾಲಕ್ರಮದಲ್ಲಿ ಮತ ಎನ್ನುವ ಪದ ಪೂರ್ತಿಯಾಗಿ ಹಿಂದಿ ಪದವಾಗಿ ಬದಲಾಗಿ ಹೋಗಿದೆ. ಓಟು ಹಾಕುವುದನ್ನು ಹಿಂದಿ ಭಾಷೆಯಲ್ಲಿ ಮತದಾನ್ ಎಂದು ಕರೆಯುತ್ತಿದ್ದಾರೆ.

ಮನುಷ್ಯನ ಇಷ್ಟದೊಂದಿಗೆ ಕೂಡಿಕೊಂಡಿರುವುದೇ ಮತ. ದೇವರ ಇಷ್ಟದೊಂದಿಗೆ ಕೂಡಿಕೊಂಡಿರುವುದು ದೈವ ಮಾರ್ಗ, ಅದನ್ನೇ ಪಥವೆಂದು ಕರೆಯುತ್ತಿದ್ದೇವೆ. ಓಟು ನಿನಗೆ ಇಷ್ಟ ಬಂದವನಿಗೆ ಹಾಕುತ್ತಿದ್ದೀಯ. ಆದ್ದರಿಂದ ಓಟು ಹಾಕುವುದನ್ನು 'ಮತದಾನ್' ಎಂದು ಕರೆದಿದ್ದಾರೆ. ದೇವರ ಜ್ಞಾನವೊಂದರ ವಿಷಯದಲ್ಲಿ ಮನುಷ್ಯನ ಇಷ್ಟ ಕೆಲಸಕ್ಕೆ ಬರುವುದಿಲ್ಲ. ಆದ್ದರಿಂದ ದೈವ ಇಷ್ಟದ ಪ್ರಕಾರ ನಡೆಯಬೇಕೆಂದು, ದೇವರ ಗ್ರಂಥಗಳಲ್ಲಿ ದೇವರು ಏನು ಹೇಳಿದ್ದಾನೋ ಅದರ ಪ್ರಕಾರ ನಡೆಯುವುದಕ್ಕೆ ದೈವ ಗ್ರಂಥಗಳನ್ನು ಮಾನವನು ಅನುಸರಿಸುತ್ತಿದ್ದಾನೆ. ಆದ್ದರಿಂದ ದೇವರ ವಿಷಯದಲ್ಲಿ **'ಪಥವೇ ಮುಖ್ಯ'** ಎಂದು ಹೇಳುತ್ತಿದ್ದೇವೆ. ಮತ ಹೊರಗಿನ ಪ್ರಾಪಂಚಿಕ ವಿಷಯಗಳಲ್ಲಿ ಕೆಲಸಕ್ಕೆ ಬರುತ್ತದೆ. ದೇವರ ಜ್ಞಾನದಲ್ಲಿ ಮತ ಎನ್ನುವ ಪದವನ್ನು ಉಪಯೋಗಿಸಿದರೇ ದೇವರು "ನಿನ್ನ ಇಷ್ಟವಾ! ನನ್ನ ಇಷ್ಟವಾ!" ಎಂದು ನುಡಿಯುತ್ತಾನೆ. ಆಧ್ಯಾತ್ಮಿಕ ಜ್ಞಾನದಲ್ಲಿ ಪಥವು ಪ್ರಾಪಂಚಿಕ ಜ್ಞಾನದಲ್ಲಿ ಮತವು ಅವಶ್ಯ. ಆದರೆ ಮನುಷ್ಯ ದೇವರ ವಿಷಯದಲ್ಲಿ ಮತವನ್ನು ಅನುಸರಿಸುವುದರಿಂದ ಮನುಷ್ಯನಿಗೆ ದೈವ ಜ್ಞಾನವು ತಿಳಿಯದಂತೆ ಹೋಗಿದೆ. ನಾನು ದೈವ ವಿಷಯಗಳಲ್ಲಿ ದೇವರ ಇಷ್ಟವನ್ನು ಅನುಸರಿಸಿ ನಡೆಯುವುದರಿಂದ ನನಗೆ ಯಾರಿಗೂ ತಿಳಿಯದ ಜ್ಞಾನ ತಿಳಿದಿದೆ. ಆದ್ದರಿಂದ ಸೃಷ್ಠಿ ಆದಿಯಲ್ಲಿ ಆಕಾಶವಾಣಿ ಏನು ಹೇಳಿದೆಯೋ, ಹೇಗೆ ಹೇಳಿದೆಯೋ ತಿಳಿದಿದ್ದೇನೆ. ನನಗೆ ತಿಳಿದಿದೆ ಆದ್ದರಿಂದ ಧೈರ್ಯವಾಗಿ ನಿಮಗೆ ಹೇಳಲ್ಪಡುತ್ತಿದ್ದೇನೆ. ಪ್ರಪಂಚ ವಿಷಯಗಳಲ್ಲಿ ಅಂದರೇ ನನ್ನ ಕುಟುಂಬದಲ್ಲಿ ನನ್ನ ಇಷ್ಟದ ಪ್ರಕಾರ ನಡೆಯಬೇಕೆಂದು ಹೇಳುತ್ತಿರುತ್ತೇನೆ. ನನ್ನ ಕುಟುಂಬದಲ್ಲಿ ಎಲ್ಲಾ ನನ್ನ ಇಷ್ಟವೇ, ಆದ್ದರಿಂದ ಪ್ರಪಂಚ ವಿಷಯಗಳಲ್ಲಿ ಮತ ಇರಬೇಕೆಂದು, ದೇವರ ವಿಷಯದಲ್ಲಿ ಮತ ಇರಬಾರದೆಂದು ಹೇಳುತ್ತಿದ್ದೇನೆ. ನಿನಗೆ ಈ

ವಿವರ ತಿಳಿಯದೇ ಎಲ್ಲಾ ಕಡೆ ದೈವ ಮಾರ್ಗದಲ್ಲಿಯೂ ಸಹ ಮತವನ್ನೇ ಹೇಳುತ್ತಿದ್ದೀಯ. ನಾನು ಹಾಗೆ ಹೇಳುತ್ತಿಲ್ಲ.

'ಮತ' ಎನ್ನುವ ಪದ ಹಿಂದಿ ಭಾಷೆಯಲ್ಲಿ ಉಳಿದುಹೋಗಿದೆ. ವಾಸ್ತವವಾಗಿ ಓಟು ಎನ್ನುವ ಪದ ಹಿಂದಿ ಭಾಷೆಯಲ್ಲಿನದು. ಆದರೆ ಓಟು ಎನ್ನುವುದು ತೆಲುಗು ಭಾಷೆಯಲ್ಲಿ ತೆಲುಗು ಪದವಾಗಿ ಹೇಳುತ್ತಿದ್ದೇವೆ. ಮತದಾನ್ ಎನ್ನುವ ಮಾತನ್ನು ಹೇಳುತ್ತಾ 'ಮತ' ಎನ್ನುವ ಪದ ಹಿಂದಿ ಪದವಾಗಿ ತಿಳಿಯುತ್ತಿದ್ದೇವೆ. ಅಲ್ಲಿ 'ಮತದಾನ್' ಎಂದು ಹೇಳಿದಾಗ ತನ್ನ ಇಷ್ಟವನ್ನು ದಾನ ಮಾಡುವುದೆಂದು ಅರ್ಥ ಬರುತ್ತಿದೆ. ದೇವರ ವಿಷಯದಲ್ಲಿ ದೇವರು ಹೇಳಿದಂತೆ ಅಂದರೆ ದೇವರ ಜ್ಞಾನ ಇರುವಂತೆ ನಡೆಯಬೇಕು. ಅಲ್ಲಿ ನಮ್ಮ ಇಷ್ಟ ಕೆಲಸಕ್ಕೆ ಬರುವುದಿಲ್ಲ. ನಮ್ಮ ಇಷ್ಟವನ್ನು ಪಕ್ಕದ ಮನೆಯಲ್ಲಿ ಹೇಳಿದರೂ ಅವರು ನಮ್ಮ ಇಷ್ಟವನ್ನು ಒಪ್ಪಿಕೊಳ್ಳುವುದಿಲ್ಲ. ನಿಮ್ಮ ಇಷ್ಟವನ್ನು ನಿನ್ನ ಪಕ್ಕದಮನೆಯವರೇ ಒಪ್ಪಿಕೊಳ್ಳದಿರುವಾಗ ಎಷ್ಟೋ ದೊಡ್ಡ ದೇವರ ಹತ್ತಿರ ಎಷ್ಟೋ ಚಿಕ್ಕವನಾದ ನಿನ್ನ ಇಷ್ಟವನ್ನು ದೇವರು ಒಪ್ಪಿಕೊಳ್ಳುತ್ತಾನಾ! ನೀವೇ ಹೇಳಿರಿ. ಆದ್ದರಿಂದ ನಿನ್ನ ಇಷ್ಟವನ್ನು ನಿನ್ನ ಮನೆಯಲ್ಲಿ ತೋರಿಸಿಕೊ, ದೇವರ ವಿಷಯದಲ್ಲಿ ತೋರಿಸಬೇಡ. ಮತ ಎನ್ನುವುದು ದೇವರ ಜ್ಞಾನದ ಹತ್ತಿರ ಇರಬಾರದು. ಮನುಷ್ಯ ದೇವರಿಗೆ ಇಷ್ಟನಾಗಿ ಇರಬೇಕು.

**ಪ್ರಶ್ನೆ :– ನಿನ್ನ ಮಾತಿನ ಪ್ರಕಾರವಾದರೇ ದೇವರು ಒಂದೊಂದು ಮತಕ್ಕೆ ಒಂದೊಂದು ಗ್ರಂಥವನ್ನು ಏಕೆ ಹೇಳಿದ್ದಾನೆ? ದೈವ ಗ್ರಂಥಗಳು ಮೂರೂ ಮೂರು ಹೆಸರುಗಳೊಂದಿಗೆ ಬೇರೆಬೇರೆಯಾಗಿ ಇವೆಯಲ್ಲವೆ! ಆ ಗ್ರಂಥಗಳನ್ನು ಅನುಸರಿಸುವ ನಾವು ಮೂರು ಮತಗಳಿವೆಯೆಂದು ಹೇಳುತ್ತಿದ್ದೇವೆ. ಯಾರ ಮತದಲ್ಲಿ ಅವರನ್ನು ಇರಲು ಹೇಳುತ್ತಿದ್ದೇವೆ. ದೇವರು ಕೊಟ್ಟಿರುವ ಗ್ರಂಥಗಳಲ್ಲಿ ಭಗವದ್ಗೀತೆ ಹಿಂದೂಗಳಿಗೆಂದು, ಬೈಬಲ್ ಕ್ರೈಸ್ತರಿಗೆಂದು, ಖುರಾನ್ ಮುಸ್ಲಿಮ್‌ರಿಗೆಂದು ಹೇಳುತ್ತಿದ್ದೇವಲ್ಲವೆ! ದೇವರ ಗ್ರಂಥಗಳನ್ನನುಸರಿಸಿಯೇ ಅಲ್ಲವೆ! ಮೂರು ಮತಗಳ ಹೆಸರುಗಳನ್ನು ಹೇಳುತ್ತಿದ್ದೇವೆ. ನೀವು ದೇವರ ಜ್ಞಾನ ವಿಷಯಗಳಲ್ಲಿ ಮತಗಳ**

**ಪ್ರಸ್ತಾವನೆ ಇರಬಾರದೆಂದು ಹೇಳಿದಾಗ ಮುಸ್ಲಿಮ್‌ರು ಖುರಾನನ್ನು ಏಕೆ ಓದಬೇಕು? ಕ್ರೈಸ್ತರು ಬೈಬಲ್‌ನ್ನು ಏಕೆ ಓದಬೇಕು? ಹಿಂದೂಗಳು ಭಗವದ್ಗೀತೆಯನ್ನು ಏಕೆ ಓದಬೇಕು? ನಮ್ಮ ಮಾತಿಗೆ ಉತ್ತರವನ್ನು ತಿಳಿಸಿರಿ.**

**ಉತ್ತರ :–** ಮತವನ್ನನುಸರಿಸಿ ಗ್ರಂಥ ಬಂದಿದೆಯಾ? ಗ್ರಂಥವನ್ನನುಸರಿಸಿ ಮತ ಹುಟ್ಟಿದೆಯಾ! ಎಂದು ನಾನು ಕೇಳುತ್ತಿದ್ದೇನೆ, ನೀವು ಹೇಳಬಲ್ಲಿರಾ? ಭಗವದ್ಗೀತಾ ಜ್ಞಾನವನ್ನು ಕೃಷ್ಣನು ಐದು ಸಾವಿರ ವರ್ಷಗಳ ಕೆಳಗೆ ಅಂದರೇ 5150 ಸುಮಾರಿಗೆ ಮೇಲ್ಪಟ್ಟು ಹೇಳಿದ್ದಾನೆ. ಆದಿನ ಹಿಂದೂ ಮತವೆನ್ನುವುದು ಇಲ್ಲ. ಆ ಕಾಲದಲ್ಲಿ ಮತವೆನ್ನುವ ಮಾತೇ ಇಲ್ಲ. ಭಗವದ್ಗೀತೆ ಹೇಳಿದ ಸ್ವಲ್ಪಕಾಲಕ್ಕೆ ಒಂದು ಅಥವಾ ಎರಡು ವರ್ಷಗಳಲ್ಲಿ ಭಗವದ್ಗೀತಾ ಜ್ಞಾನವನ್ನು ಕೈಯಿಂದ ಬರೆದ ಗ್ರಂಥವಾಗಿ ವ್ಯಾಸನು ತಯಾರಿಸಿದ್ದಾನೆ. ಹಾಗೆ ಭಗವದ್ಗೀತಾ ಗ್ರಂಥ ತಯಾರಾದ ಮೂರು ಸಾವಿರ ವರ್ಷಗಳಿಗೆ ಅಂದಾಗ! ಈ ದಿನಕ್ಕೆ ಸುಮಾರು ಎರಡು ಸಾವಿರ ವರ್ಷಗಳ ಪೂರ್ವದಲ್ಲಿ ಯೇಸು ಪ್ರಭು ಸ್ವಲ್ಪ ಜ್ಞಾನವನ್ನು ಹೇಳಿದಾಗ, ಅದನ್ನು ಆಧಾರ ಮಾಡಿಕೊಂಡು ನೂರರಷ್ಟು ಹೆಚ್ಚಾಗಿ ಬೈಬಲ್ ಎನ್ನುವ ಗ್ರಂಥವನ್ನು ತಯಾರು ಮಾಡಿದ್ದಾರೆ. ಈದಿನ ಬೈಬಲ್‌ನಲ್ಲಿ ಯೇಸು ಹೇಳಿದ ಮಾತುಗಳು ನಾಲ್ಕು ಸುವಾರ್ತೆಗಳಾಗಿರುವಾಗ ಮೇಲಾಗಿ 62 ಭಾಗಗಳನ್ನು ಅಧ್ಯಾಯಗಳಾಗಿ ಬರೆದಿದ್ದಾರೆ. ಸರಿ ಆದಿನ ಪ್ರತ್ಯೇಕವಾದ ಕ್ರೈಸ್ತ ಮತ ಇತ್ತಾ? ಹಾಗೆಯೇ ಬೈಬಲ್ ತಯಾರಾದ ನಂತರ ಆರುನೂರು ವರ್ಷಗಳಿಗೆ ಜಿಬ್ರಯೇಲ್ ಮುಹಮ್ಮದ್ ಪ್ರಕ್ತರವರಿಗೆ ಜ್ಞಾನವನ್ನು ಹೇಳಿದಾಗ, ನಂತರ ಖುರಾನ್ ಗ್ರಂಥವೂ ಸಹ ತಯಾರಾಗಿದೆ. ಈ ಮೂರು ಗ್ರಂಥಗಳನ್ನು ದೈವಗ್ರಂಥಗಳೆಂದು ಹೇಳುತ್ತಿದ್ದೇವೆ. ಈ ಮೂರು ಗ್ರಂಥಗಳಲ್ಲಿ ದೇವರ ಧರ್ಮಗಳು ಇವೆ. ಮನುಷ್ಯನೊಂದರ ಮತಿಯಾಗಲಿ, ಅನುಮತಿಯಾಗಲಿ, ಇಷ್ಟವಾಗಲಿ ಈ ಗ್ರಂಥಗಳಲ್ಲಿ ಯಾವ ಮಾತ್ರವೂ ಇಲ್ಲ. ದೇವರು ಖುರಾನ್‌ನನ್ನು ಮುಸ್ಲಿಮ್‌ರಿಗೆಂದು, ಬೈಬಲ್ ಕ್ರೈಸ್ತರಿಗೆಂದು, ಭಗವದ್ಗೀತೆ ಹಿಂದೂಗಳಿಗೆಂದು ಹೆಸರಿಟ್ಟು ಹೇಳಲಿಲ್ಲ. ಹಿಂದೂಗಳೆಂದಾಗಲಿ, ಕ್ರೈಸ್ತರೆಂದಾಗಲಿ, ಮುಸ್ಲಿಮ್‌ರೆಂದಾಗಲಿ ಪ್ರತ್ಯೇಕಿಸಿ ಹೇಳದಂತೆ ಮೂರು ಗ್ರಂಥಗಳಲ್ಲಿಯೂ ಸಮಸ್ತ ಮಾನವರಿಗೂ

ಹೇಳುವ ಹಿತೋಪದೇಶವೆಂದು, ಸಮಸ್ತ ಜನರಿಗೂ ತಿಳಿಸುವ ಜ್ಞಾನವೆಂದು ಹೇಳಲಾಗಿದೆಯೇ ಹೊರತು ಇದು ಇಂತಹ ಮತದವರಿಗೆಂದು ಹೇಳಲಿಲ್ಲ. ಹಾಗಿರುವಾಗ ಮೂರು ದೈವ ಗ್ರಂಥಗಳು ಮನುಷ್ಯರೆಲ್ಲರಿಗೂ ಅನ್ವಯಿಸುತ್ತವೆ. ಒಂದು ಮತಕ್ಕೆ ಒಂದು ಗ್ರಂಥ ಪರಿಮಿತವಲ್ಲ. ಮೂರು ಗ್ರಂಥಗಳು ಸಮಸ್ತ ಜನರವೆಂದು ದೇವರು ಮೂರು ಗ್ರಂಥಗಳಲ್ಲಿ ಹೇಳಿರುವಾಗ, ಇದು ನಮ್ಮ ಗ್ರಂಥ ಅದು ನಿಮ್ಮ ಗ್ರಂಥ ಎಂದು ಏಕೆ ತಿಳಿದುಕೊಳ್ಳಬೇಕು. ಮನುಷ್ಯರೇ ಮತವನ್ನು ಸೃಷ್ಠಿಸಿಕೊಂಡು ಮನುಷ್ಯರೇ ಬೇರೆಬೇರೆ ಮತಗಳಾಗಿ ವಿಭಜನೆಯಾಗಿ ಗ್ರಂಥಗಳನ್ನು ಸಹ ಹಂಚಿಕೊಳ್ಳುವುದನ್ನು ಮಾಡಿದ್ದಾರೆ. ಇದೆಲ್ಲವೂ ಮನುಷ್ಯರು ಮಾಡಿದ ತಪ್ಪುಗಳೇ ಹೊರತು ದೇವರು ಎಲ್ಲಿಯೂ ತನ್ನ ಜ್ಞಾನವನ್ನಾಗಲೀ, ತಾನೇ ಸೃಷ್ಟಿಸಿದ ಮನುಷ್ಯರನ್ನಾಗಲೀ ವಿಭಜಿಸಲಿಲ್ಲ. ದೇವರು ಹೇಳಿದ ಜ್ಞಾನ ಮನುಷ್ಯರೆಲ್ಲರಿಗೂ ಸಮಾನವಾಗಿದ್ದಾಗ, ಮನುಷ್ಯರೇ ದೇವರ ಜ್ಞಾನವನ್ನು ನನ್ನದು ನಿನ್ನದು ಎಂದು ಬೇರ್ಪಡಿಸಿಕೊಂಡು ಹೇಳುವುದರಿಂದ, ಇಲ್ಲಿಯವರೆಗೂ ಯಾವ ಮತಸ್ಥನಿಗೂ ದೇವರ ಜ್ಞಾನ ಅರ್ಥವಾಗದೇ ಹೋಗಿದೆಯೆಂದು ಹೇಳಬಹುದು. ಭಗವದ್ಗೀತಾ ಜ್ಞಾನವು ಹಿಂದೂಗಳಿಗೂ, ಬೈಬಲ್ ಜ್ಞಾನ ಕ್ರೈಸ್ತರಿಗೂ, ಖುರಾನ್ ಜ್ಞಾನ ಮುಸ್ಲಿಮ್‌ರಿಗೂ ಸಂಪೂರ್ಣವಾಗಿ ತಿಳಿಯದಂತೆ ಹೋಗಿರುವುದಲ್ಲದೆ, ದೇವರು ಹೇಳಿದ ಜ್ಞಾನವನ್ನು ಬೇರೆ ವಿಧವಾಗಿ ಅರ್ಥಮಾಡಿಕೊಳ್ಳುವುದು ನಡೆದಿದೆ. ಮುಸ್ಲಿಮನು ಬೈಬಲ್‌ನನ್ನು, ಭಗವದ್ಗೀತೆಯನ್ನು ತನ್ನ ಖುರಾನ್‌ನಂತೆ ನೋಡಿದಾಗ ಆ ಎರಡು ಗ್ರಂಥಗಳನ್ನು ಅಲ್ಲಾಹ್ ಕೊಟ್ಟಿದ್ದಾನೆಂದು ತಿಳಿದು ಗೌರವಿಸಿದಾಗ, ಅಲ್ಲಾಹ್ ಹೇಳಿದ ಜ್ಞಾನವು ಸಂಪೂರ್ಣವಾಗಿ ಅರ್ಥವಾಗಬಲ್ಲದು. ಹಾಗೆಯೇ ಕ್ರೈಸ್ತವನು ಖುರಾನ್‌ನನ್ನು, ಭಗವದ್ಗೀತೆಯನ್ನು ತನ್ನ ಬೈಬಲ್‌ನಂತೆ ಭಾವಿಸಿದಾಗ, ಆ ಎರಡು ಗ್ರಂಥಗಳನ್ನು ದೇವರೇ ಕೊಟ್ಟಿದ್ದಾನೆಂದು ಗೌರವಿಸಿದಾಗ ದೇವರು ಹೇಳಿದ ಜ್ಞಾನ ಅರ್ಥವಾಗಬಲ್ಲದು. ಅದೇ ರೀತಿ ಹಿಂದೂ ಬೈಬಲ್‌ನನ್ನು, ಖುರಾನ್‌ನನ್ನು ತನ್ನ ಭಗವದ್ಗೀತೆಯಂತೆ ನೋಡುವುದಾದರೇ, ಆ ಎರಡು ಗ್ರಂಥಗಳು ದೈವ ಗ್ರಂಥಗಳೇ ಎಂದು ತಿಳಿದು ಗೌರವಿಸಿದಾಗ, ಪರಮಾತ್ಮನಾದ ದೈವ ಹೇಳಿದ ಜ್ಞಾನ ಹಿಂದೂಗಳಿಗೆ ಸಂಪೂರ್ಣವಾಗಿ ಅರ್ಥವಾಗಬಲ್ಲದು.

ಆದರೆ ಈದಿನ ಒಂದು ಮತದವರು ಮತ್ತೊಂದು ಮತದವರನ್ನು ದ್ವೇಷದಿಂದ ನೋಡುತ್ತಾ ದೇವರು ಹೇಳಿದ ಜ್ಞಾನವನ್ನು ಸಹ ಅಗೌರವ ಪಡಿಸುತ್ತಿದ್ದಾರೆ. ಯಾರಿಗೆ ಅವರು ಅವರವರ ಮತಗಳೇ ಸರಿಯಾದವೆಂದು ಇತರ ಮತಗಳಲ್ಲಿ ಜ್ಞಾನವೇ ಇಲ್ಲವೆಂದು, ಮತದ್ವೇಷ ಹೊಂದಿದ್ದಾರೆ. ಎಲ್ಲರಿಗೂ ಸೃಷ್ಟಿಕರ್ತ ಒಬ್ಬನೇಯೆಂದು, ಎಲ್ಲರಿಗೂ ತಂದೆಯಂತಿರುವ ದೇವರು ಒಬ್ಬನೇಯೆಂದು ತಿಳಿಯದೆ ಒಂದೇ ದೈವಜ್ಞಾನವಿರುವ ದೈವ ಗ್ರಂಥಗಳನ್ನು ಬೇರೆಬೇರೆಯಾಗಿ ನೋಡುತ್ತಿದ್ದಾರೆ. ಬೈಬಲ್ ಎಂದರೆ ಹಿಂದೂಗಳಿಗೆ ಸ್ವಲ್ಪವೂ ಹಿಡಿಸುವುದಿಲ್ಲ. ಭಗವದ್ಗೀತೆ ಎಂದರೇ ಕ್ರೈಸ್ತರಿಗೂ ಸಹ ಸ್ವಲ್ಪವೂ ಹಿಡಿಸುವುದಿಲ್ಲ. ಎರಡು ಗ್ರಂಥಗಳಲ್ಲಿ ಇರುವ ಜ್ಞಾನ ಒಂದೇ ಆದರೂ, ಎರಡು ಗ್ರಂಥಗಳ ಜ್ಞಾನವನ್ನು ಹೇಳಿದವನು ಒಬ್ಬನೇ ಆದರೂ ಆ ವಿಷಯವನ್ನು ಗ್ರಹಿಸದ ಮನುಷ್ಯರು ಒಬ್ಬರಿಗೊಬ್ಬರು ವಿರೋಧವನ್ನು ವ್ಯಕ್ತಪಡಿಸಿಕೊಳ್ಳುತ್ತಿದ್ದಾರೆ. ಅಂತಹ ವಿರೋಧಗಳನ್ನು ಬಿಟ್ಟು, ಪರಮತ ದ್ವೇಷವೆನ್ನುವ ಮಾತು ಇಲ್ಲದಂತೆ ಪ್ರತಿ ಮತಸ್ಥನು ಮೂರು ದೈವ ಗ್ರಂಥಗಳನ್ನು ಗೌರವಿಸಿ ಓದಿ ಅದರಲ್ಲಿನ ಜ್ಞಾನವನ್ನು ತಿಳಿಯುವುದಾದರೇ, ಆಗ ಸರಿಯಾದ ಭಾವದೊಂದಿಗೆ ದೇವರು ತಿಳಿಸಿದ ಅರ್ಥದಿಂದ ಗ್ರಂಥದಲ್ಲಿನ ಜ್ಞಾನ ತಿಳಿಯಬಲ್ಲದು.

**ಪ್ರಶ್ನೆ :– ಮೂರು ಗ್ರಂಥಗಳನ್ನು ದೈವ ಗ್ರಂಥಗಳೆಂದು ವಿಶ್ವಾಸಿಸಿ, ಗ್ರಂಥಗಳನ್ನು ಗೌರವಿಸುತ್ತಾ ಓದಿದರೇ ಅದರಲ್ಲಿನ ಜ್ಞಾನ ತಿಳಿಯುಬಲ್ಲದು ಎಂದು ಹೇಳುತ್ತಿದ್ದೀರಲ್ಲವೆ! ಮೂರು ಗ್ರಂಥಗಳಲ್ಲಿ ಸಂಪೂರ್ಣಜ್ಞಾನವಿರುವಾಗ ಆಕಾಶ ಪ್ರತಿ ವರ್ಷ ಜ್ಞಾನವನ್ನು ಹೇಳುತ್ತಿದೆಯೆಂದು ಎಂದಿದ್ದೀರಲ್ಲವೆ! ಗ್ರಂಥಗಳಲ್ಲಿಯೇ ಜ್ಞಾನ ಇರುವಾಗ ಆಕಾಶ ತನ್ನ ಶಬ್ದದಿಂದ ಹೇಳಬೇಕಾದ ಅವಶ್ಯವೇನಿದೆ?**

**ಉತ್ತರ :–** ಒಬ್ಬ ಮತಸ್ಥನು ಮೂರು ಗ್ರಂಥಗಳನ್ನು ಒಂದೇ ದೃಷ್ಟಿಯಿಂದ ನೋಡಲಿಲ್ಲ. ಮೂರು ಮತಸ್ಥರಲ್ಲಿ ಒಬ್ಬ ಮತಸ್ಥನು ಉಳಿದ ಎರಡು ಗ್ರಂಥಗಳನ್ನು ಅಸೂಯೆಯಿಂದ ನೋಡುವುದು, ಅವುಗಳನ್ನು ಕನಿಷ್ಟ ಕೈಯಿಂದ ತಾಕುವುದು ಸಹ ಇಲ್ಲದಂತೆ ಹೋಗುತ್ತಿದೆ. ಒಂದೇ ದೇವರ ಜ್ಞಾನವನ್ನು ಒಂದು ಕಡೆ

ತನ್ನ ಗ್ರಂಥದಲ್ಲಿರುವುದನ್ನು ಗೌರವಿಸುತ್ತಾ, ಮತ್ತೊಂದು ಕಡೆ ಉಳಿದ ಎರಡು ಗ್ರಂಥಗಳಾಗಿ ಇರುವುದನ್ನು ಅಗೌರವಪಡಿಸುವುದರಿಂದ, ತಾನು ಓದುತ್ತಿರುವ ಗ್ರಂಥದಲ್ಲಿನ ಜ್ಞಾನವೂ ಸಹ ಸರಿಯಾಗಿ ತಿಳಿಯದಂತೆ ಹೋಗಿದೆ. ಒಟ್ಟಾರೆ ಐದು ಸಾವಿರ ವರ್ಷಗಳಿಂದ ಪ್ರಥಮ, ಮಧ್ಯಮ, ಅಂತಿಮ ದೈವ ಗ್ರಂಥಗಳಾಗಿ ಜ್ಞಾನವು ಗ್ರಂಥಗಳಾಗಿ ಹೊರಗೆ ಬಂದಿದ್ದರೂ, ಅದು ಮನುಷ್ಯರಿಗೆ ತಿಳಿಯದಂತೆ ಹೋಗಿರುವುದರಿಂದ ತನ್ನ ಧರ್ಮದ ಪ್ರಕಾರ ಆಕಾಶ ಪ್ರತಿ ವರ್ಷ ದೈವ ಜ್ಞಾನವನ್ನು ತಿಳಿಸುತ್ತಲೇ ಇದೆ.

**ಪ್ರಶ್ನೆ :– ಆಕಾಶ ದೈವ ಜ್ಞಾನವನ್ನು ಪ್ರತಿ ವರ್ಷ ತಿಳಿಸಿದರೂ, ಆಕಾಶ ಗುಡುಗುಗಳ ರೂಪದಲ್ಲಿ ಜ್ಞಾನವನ್ನು ತಿಳಿಸುತ್ತಿದೆಯೆಂದು ಮನುಷ್ಯರಿಗೆ ತಿಳಿಯದಲ್ಲವೆ! ಆಕಾಶ ಮೇಘರೂಪದಲ್ಲಿದ್ದು ಗುಡುಗುತ್ತಾ ಶಬ್ದವನ್ನು ಮಾಡಿದರೆ ಅದು ಜ್ಞಾನವೆಂದು ಮನುಷ್ಯರಿಗೆ ತಿಳಿದಿಲ್ಲ! ಆದ್ದರಿಂದ ಮೇಘಗಳು ಬೇರೆ ವಿಧವಾಗಿ ಮನುಷ್ಯರಿಗೆ ತಿಳಿಯುವ ಭಾಷೆಯಲ್ಲಿ ಹೇಳಬಹುದಲ್ಲವೆ!**

**ಉತ್ತರ :–** ಆಕಾಶಕ್ಕಿಂತ ಎಷ್ಟೋ ದೊಡ್ಡ ದೇವರು ಸ್ವಚ್ಛವಾಗಿ ಮನುಷ್ಯರು ಮಾತನಾಡುವ ಭಾಷೆಯಲ್ಲಿಯೇ ಮನುಷ್ಯನಾಗಿ ಬಂದು ಹೇಳಿ ಹೋದರೂ ಮನುಷ್ಯ ಜ್ಞಾನವನ್ನು ಗ್ರಹಿಸಲಿಲ್ಲ. ಮನುಷ್ಯರು ಓದುವ ಭಾಷೆಯಲ್ಲಿಯೇ ಗ್ರಂಥಗಳು ಕೊಟ್ಟರೂ ಅವುಗಳಲ್ಲಿರುವುದು ನಮ್ಮ ದೇವರು ಹೇಳಿದ ಜ್ಞಾನವೇ ಎಂದು ತಿಳಿಯದೇ ಯಾರೋ ಶತ್ರು ಹೇಳಿದ ಜ್ಞಾನವಾಗಿ ತಿಳಿದು ಓದಲಿಲ್ಲ. ಅಷ್ಟು ಒಳ್ಳೆಯ ಅವಕಾಶವಿದ್ದರೂ ತಿಳಿಯದವರು, ಆಕಾಶ ಮಾತನಾಡಿ ತನ್ನ ಭಾಷೆಯಲ್ಲಿ ಹೇಳಿದರೇ ಕೇಳುತ್ತಾರೆಂದು ನಂಬಿಕೆ ಏನು? ಮನುಷ್ಯರು ಮಾತನಾಡಬಲ್ಲರು, ನಾಯಿಗಳು ಬೊಗಳುತ್ತವೆ. ಹಾಗೆಯೇ ಆಕಾಶ ಶಬ್ದ ಮಾಡಬಲ್ಲದು. ನಾಯಿ ಏನು ಹೇಳಿದರೂ ಬೊಗಳಿದಂತೆ ಇರುತ್ತದೆ. ಆದರೆ ಆ ಬೊಗಳುವಿಕೆಯು ಅನೇಕ ವಿಧಗಳಾಗಿ ಇರುತ್ತದೆ. ಹಾಗೆಯೇ ಆಕಾಶ ಏನು ಹೇಳಿದರೂ ಶಬ್ದವಾಗಿಯೇ ಹೇಳುತ್ತದೆ. ಆದರೆ ಆ ಶಬ್ದವು ಅನೇಕ ವಿಧಗಳಾಗಿ ಇರುತ್ತದೆ. ಆಕಾಶ ಶಬ್ದ ರೂಪದಲ್ಲಿ ಜ್ಞಾನವನ್ನು ತಿಳಿಸಿದರೂ,

ಇದು ಇಂತಹ ಜ್ಞಾನವೆಂದು ಮನುಷ್ಯ ಗ್ರಹಿಸಲಾರದಂತಿದ್ದಾನೆ. ಆದ್ದರಿಂದ ತನ್ನ ಧರ್ಮದ ಪ್ರಕಾರ ದೇವರ ಸೇವೆ ಮಾಡಿದಂತೆ ಆಕಾಶ ಪ್ರತಿ ವರ್ಷ ತನ್ನ ಶಬ್ದದಿಂದ ಜ್ಞಾನವನ್ನು ಅನೇಕ ವಿಧಗಳ ಶಬ್ದಗಳಲ್ಲಿ ತಿಳಿಸುತ್ತಿದೆ. ಆಕಾಶ ಮಾಡುವ ಶಬ್ದ ಜ್ಞಾನವೇಯೆಂದು ಮನುಷ್ಯರಿಗೆ ತಿಳಿಯದಂತೆ ಹೋಗಿದೆ. ಆದರೆ ಶ್ರದ್ಧೆ ಇರುವವನಿಗೆ ಆಕಾಶ ತಿಳಿಸುವ ಶಬ್ಧರೂಪ ಜ್ಞಾನವು ಇಂತಹದೆಂದು ತಿಳಿಯುತ್ತದೆ.

**ಪ್ರಶ್ನೆ :– ಆಕಾಶ ಮಾಡುವ ಶಬ್ದವನ್ನು ಜ್ಞಾನವೆಂದು ಗ್ರಹಿಸುವ ಮನುಷ್ಯರಿದ್ದಾರಾ? ಗುಡುಗುಗಳ ಶಬ್ದದಲ್ಲಿನ ಜ್ಞಾನವನ್ನು ತಿಳಿಯುವುದಕ್ಕೆ ಅವನಿಗೆ ಮೊದಲಿನಿಂದ ಗಡುಗಿನ ವಿಷಯವೆಲ್ಲವೂ ತಿಳಿದಿರಬೇಕಲ್ಲವೆ! ಅಂತಹವರು ಇದ್ದಾರೆನ್ನುತ್ತೀರ?**

**ಉತ್ತರ :–** ಅಂತಹವರಿರುವುದರಿಂದಲೇ ಅಲ್ಲವೆ! ಆಕಾಶ ಮೇಘಗಳು ಜ್ಞಾನವನ್ನು ಗುಡುಗುಗಳ ರೂಪದಲ್ಲಿ ಹೇಳುತ್ತಿವೆಯೆಂದು ನಾವು ಈಗ ಹೇಳುತ್ತಿದ್ದೇವಲ್ಲವೆ! ಆಕಾಶ ಜ್ಞಾನ ಹೇಳುತ್ತಿದೆ ಎನ್ನುವುದಲ್ಲದೆ, ಆಕಾಶ ಅನೇಕ ವಿಧಗಳ ದೈವ ಜ್ಞಾನವನ್ನು ತಿಳಿಸುತ್ತಿದೆಯೆಂದು ಹೇಳುತ್ತಿದ್ದೇವೆ.

**ಪ್ರಶ್ನೆ :– ಆದರೆ ಆಕಾಶ ಮೇಘ ರೂಪದಲ್ಲಿ ಗುಡುಗುವ ಗುಡುಗುಗಳಿಗೂ, ಮಿಂಚುವ ಮಿಂಚುಗಳಿಗೂ, ಬೀಳುವ ಸಿಡಿಲುಗಳ ಕುರಿತು ನಿಮಗೆ ತಿಳಿದಿರುತ್ತದೆಂದು ಅಂದುಕೊಳ್ಳುತ್ತಿದ್ದೇವೆ. ನಮ್ಮ ಊಹೆ ನಿಜವೇನಾ?**

**ಉತ್ತರ :–** ನನಗೆ ಪೂರ್ತಿ ವಿವರ ತಿಳಿದಿಲ್ಲವೆಂದು ಹೇಳಬಲ್ಲೆನು. ಆದರೂ ಗುಡುಗು, ಮಿಂಚು, ಸಿಡಿಲು ಗಳಲ್ಲಿ ಜ್ಞಾನ ಚಿಹ್ನೆಗಳಿವೆಯೆಂದು ಹೇಳಬಲ್ಲೆನು. ಆದರೆ ಒಂದು ಮಾತ್ರ ನಿಶ್ಚಯವಾಗಿ ಹೇಳಬಲ್ಲೆನು. ಅದೇನೆಂದರೇ! ಭಗವದ್ಗೀತೆಯಲ್ಲಿ ಭಗವಂತನ ರೂಪದಲ್ಲಿ ದೇವರು ಒಂದು ಮಾತನ್ನು ಹೇಳಿದ್ದಾನೆ. ಶ್ರದ್ಧೆ ಇದ್ದರೆ ಜ್ಞಾನ ಲಭಿಸುತ್ತದೆಂದು ಹೇಳುತ್ತಾ ಶ್ಲೋಕದಲ್ಲಿ **"ಶ್ರದ್ಧಾವಾನ್ ಲಭತೇ ಜ್ಞಾನಮ್"** ಎಂದಿದ್ದಾನೆ. ದೇವರು ಒಂದು ಮಾತನ್ನು ಹೇಳಿದ್ದಾನೆಂದರೇ ಅದು ಎಂದಿಗೂ ಖಚಿತವಾಗಿ ನಡೆಯುತ್ತದೆ. ಜ್ಞಾನ

ತಿಳಿಯಬೇಕೆನ್ನುವ ಶ್ರದ್ಧೆಯನ್ನು ಬೆಳಸಿಕೊಂಡಂತಾದರೆ ಗುಡುಗುಗಳಲ್ಲಿ ನಿಕ್ಷಿಪ್ತವಾದ ಜ್ಞಾನವೂ ಸಹ ನಿನ್ನ ಹೃದಯದಲ್ಲಿ ಆತ್ಮವೇ ತಿಳಿಸುತ್ತದೆ. ನನ್ನ ಆತ್ಮ ನನಗೆ ತಿಳಿಸಿದ ಜ್ಞಾನವನ್ನನುಸರಿಸಿ ನಾನು ಈದಿನ ಗುಡುಗುಗಳಲ್ಲಿ ದೈವಜ್ಞಾನ ವಿದೆಯೆಂದು ಹೇಳುತ್ತಿದ್ದೇನೆ. ಪ್ರತಿ ವರ್ಷ ಆಕಾಶ ಜ್ಞಾನವನ್ನೇ ತಿಳಿಸುತ್ತಿದೆಯೆಂದು ನಿಶ್ಚಯವಾಗಿ ಹೇಳುತ್ತಿದ್ದೇವೆ.

**ಪ್ರಶ್ನೆ :– ಪ್ರಪಂಚದಲ್ಲಿ ಯಾರಿಗೂ ತಿಳಿಯದ ಆಕಾಶವೊಂದರ ರಹಸ್ಯ ಬೋಧನೆಗಳು ನಿನಗೊಬ್ಬನಿಗೇ ತಿಳಿದಿವೆಯಾ ಎಂದು ನಾವು ಹೇಗೆ ನಂಬಬೇಕು? ಅದಕ್ಕೆ ಏನಾದರೂ ಆಧಾರವಿದೆಯಾ?**

**ಉತ್ತರ :–** ನಾನು ನನಗೆ ತಿಳಿದಿರುವುದನ್ನು ನಿಮಗೆ ತಿಳಿಸಿದ್ದೇನೆ. ನಾನು ಹೇಳಿರುವುದೇ ನಂಬಿರೆಂದು ಹೇಳಲಿಲ್ಲ ಅಲ್ಲವೆ! ಶ್ರದ್ಧೆ ಇದ್ದರೆ ದೇವರು ಹೇಳಿದಂತೆ ತಿಳಿಯುತ್ತದೆಂದು ಹೇಳುತ್ತಿದ್ದೇವೆ. ಶ್ರದ್ಧೆ ಇಲ್ಲದೆ ಪ್ರಯತ್ನ ಮಾಡಿ ನೋಡದಂತೆಯೇ, ಆಧಾರವೇನು? ಎಂದು ಕೇಳಿದರೆ ನಾನು ಹೇಳಿರುವುದು ನಿನಗೆ ಆಧಾರವಲ್ಲ. ದೇವರು ಹೇಳಿದ ಮಾತೇ ನಿನಗೆ ಆಧಾರವೆಂದು ಹೇಳುತ್ತಿದ್ದೇನೆ. ನಾನು ಆಧಾರವೆಂದು ಹೇಳುವುದಕ್ಕೆ ನಾನು ಬರಲಿಲ್ಲ. ದೇವರ ಮಾತೇ ಎಲ್ಲರಿಗೂ ಆಧಾರವೆಂದು ಹೇಳುವುದಕ್ಕೆ ಬಂದಿದ್ದೇನೆ. ಶ್ರದ್ಧೆಯನ್ನನುಸರಿಸಿ ನಿನಗೆ ಜ್ಞಾನ ಲಭಿಸುತ್ತದೆನ್ನುವ ದೇವರ ಜ್ಞಾನವನ್ನು ಆಧಾರ ಮಾಡಿಕೊಂಡು ಪಥದಲ್ಲಿ (ದೈವ ಮಾರ್ಗದಲ್ಲಿ) ಪ್ರಯಾಣ ಸಾಗಿಸುತ್ತಿದ್ದೇನೆ. ಆದ್ದರಿಂದ ಇಲ್ಲಿಯುವರೆಗೂ ಹೇಳುತ್ತಿದ್ದೇನೆ. ನೀನು ತಿಂದ ಆಹಾರ ಯಾವ ರುಚಿಯಲ್ಲಿದೆಯೆಂದು ಕೇಳಿದರೆ ಯಾರ ಅನುಭವದಿಂದ ಅವರಿಗೆ ತಿಳಿಯುವ ವಿಧಾನ ತಿಂದವನು ಹೇಳಿದರೆ ತಿನ್ನದವನಿಗೆ ಅರ್ಥವಾಗುವುದಿಲ್ಲ. ಸ್ವತಃವಾಗಿ ತಿಂದಾಗಲೇ ಯಾರಿಗಾದರೂ ಆಹಾರದಲ್ಲಿನ ರುಚಿ ಅನುಭವಪೂರ್ವಕವಾಗಿ ತಿಳಿಯುತ್ತದೆ.

**ಪ್ರಶ್ನೆ :– ನಮ್ಮಲ್ಲಿನ ಅಜ್ಞಾನದ ಪ್ರಕಾರ ಆಗಾಗ ಪರಿಮಿತಿಯನ್ನು ಮೀರಿ ಪ್ರಶ್ನೆಗಳನ್ನು**

**ಕೇಳುತ್ತಿದ್ದೇವೇನೋ ನಮಗೆ ತಿಳಿದಿಲ್ಲ. ಪ್ರಶ್ನೆ ಕೇಳುವುದರಲ್ಲಿ ಯಾವುದಾದರೂ ತಪ್ಪುಗಳಿದ್ದರೇ ಕ್ಷಮಿಸಿರೆಂದು ಮೊದಲೇ ಕೇಳುತ್ತಿದ್ದೇವೆ.**

**ಉತ್ತರ :-** ಅಜ್ಞಾನವಿದ್ದಾಗ ಪ್ರಶ್ನೆಗಳು ಹೇಗಾದರೂ ಇರಬಹುದು. ಪರಿಮಿತಿಯನ್ನು ಮೀರಿ ಹೇಳುವವನನ್ನು ಕಡಿಮೆ ಮಾಡಿ ಕೇಳಿದಂತೆಯೂ ಕಾಣಿಸುತ್ತಿರುತ್ತದೆ. ಆದರೆ ಜ್ಞಾನವನ್ನು ತಿಳಿಯಬೇಕೆಂಬ ಶ್ರದ್ಧೆ ಇದ್ದು ಪ್ರಶ್ನೆಯನ್ನು ಹೇಗೆ ಕೇಳಿದರೂ ಪರವಾಗಿಲ್ಲ. ಕೇಳಿದ ಪ್ರಶ್ನೆ ಹೇಗಿದ್ದರೂ ಅದರಲ್ಲಿ ಉತ್ತರ ತಿಳಿಯಬೇಕೆನ್ನುವ ಆಸಕ್ತಿಯನ್ನು ಮಾತ್ರ ನಾವು ನೋಡುತ್ತೇವೆ. ಇಲ್ಲಿಯವರೆಗೂ ಜ್ಞಾನವನ್ನು ತಿಳಿಯಬೇಕೆಂಬ ಶ್ರದ್ಧೆಯಿಂದ ಯಾರು ಯಾವ ಪ್ರಶ್ನೆಯನ್ನು ಕೇಳಿದರೂ ಅದಕ್ಕೆ ನಾನು ಸಂತೋಷವಾಗಿ ಉತ್ತರವನ್ನು ಹೇಳಿದ್ದೇನೆ. ಆದರೆ ವಕ್ರ ಬುದ್ಧಿಯಿಂದ ಯಾವ ಮಾತ್ರವು ತಿಳಿಯಬೇಕೆನ್ನುವ ಶ್ರದ್ಧೆ ಇಲ್ಲದಂತೆ, ನನ್ನನ್ನು ಶೋಧಿಸಬೇಕೆಂಬ ಭಾವನೆಯಿಂದ ಸೌಮ್ಯವಾಗಿ ಪ್ರಶ್ನಿಸಿದರೂ ಅದು ನನಗೆ ಸ್ವಲ್ಪವೂ ಹಿಡಿಸುವುದಿಲ್ಲ. ಕೇಳುವವನು ಮೇಲ್ನೋಟಕ್ಕೆ ಸೌಮ್ಯವಾಗಿ ಕೇಳಿದರೂ ನನ್ನ ಒಳಗಿನಿಂದ ಉತ್ತರ ಬರುವುದಿಲ್ಲ. ಬಂದರೂ ಅದು ಕೇಳಿದವನನ್ನು ಅನ್ಯ ಮಾರ್ಗವನ್ನು ಹಿಡಿಸುವಂತೆ ಇರುತ್ತದೆ. ಒಳಗಿನಿಂದ ಬರುವ ಉತ್ತರವನ್ನನುಸರಿಸಿ ಈತನು ಕೇಳಿದ ಭಾವ ಸರಿ ಇಲ್ಲವೆಂದು ನನಗೂ ಸಹ ಅರ್ಥವಾಗಬಲ್ಲದು. ಆದ್ದರಿಂದ ಕೇಳುವ ಪ್ರಶ್ನೆ ಹೇಗಿದ್ದರೂ ಪರವಾಗಿಲ್ಲ, ನೀವು ಜ್ಞಾನವನ್ನು ತಿಳಿಯಬೇಕೆನ್ನುವ ಶ್ರದ್ಧೆಯನ್ನು ಹೊಂದಿ ಕೇಳಬೇಕೆಂದು ಹೇಳುತ್ತಿದ್ದೇವೆ.

**ಪ್ರಶ್ನೆ :- ಆಕಾಶದಲ್ಲಿನ ಮೇಘಗಳಿಂದ ಬರುವ ಶಬ್ದಗಳು ಸ್ವತಃವಾಗಿ ಆಕಾಶವೇ ಮಾಡುವವೆಂದು ಅರ್ಥವಾಗಿದೆ. ಆಕಾಶ ಮಾಡುವ ಶಬ್ದದ ಹಿಂದೆ ದೇವರ ಭಾವವಾದ ಜ್ಞಾನವಿದೆಯೆಂದು ಅರ್ಥವಾಗಿದೆ. ಆದರೆ ತಮ್ಮ ಅನುಭವದಲ್ಲಿನ ಮಿಂಚು, ಸಿಡಿಲುಗಳಲ್ಲಿ ಯಾವ ಅರ್ಥ ಒಳಗೊಂಡಿದೆಯೋ ನೀವೇ ತಿಳಿಸಿರೆಂದು ಕೋರುತ್ತಿದ್ದೇವೆ. ಇಲ್ಲಿಯವರೆಗೂ ಪ್ರಪಂಚದಲ್ಲಿ ಯಾರ ದೃಷ್ಟಿ ನೀವು ಹೇಳುವ ಗುಡುಗು ಮೇಲಾಗಲೀ, ಮಿಂಚುಗಳಮೇಲಾಗಲೀ, ಸಿಡಿಲುಗಳಮೇಲಾಗಲೀ**

**ಹೋಗಲಿಲ್ಲ. ಆದರೆ ಈಗೀಗಲೇ ನಿಮ್ಮ ಮಾತುಗಳನ್ನನುಸರಿಸಿ ಅವುಗಳ ಮೇಲೆ ಧ್ಯಾಸ ನಮಗೆ ಉಂಟಾಗುತ್ತಿದೆ. ದಯಮಾಡಿ ಮಿಂಚುಗಳ, ಸಿಡಿಲುಗಳ ಆಂತರಾರ್ಥವನ್ನು ತಿಳಿಸಿರೆಂದು ಕೋರುತ್ತಿದ್ದೇವೆ.**

**ಉತ್ತರ :–** ಹಾಗೆ ಕೇಳಿದ ಮೊದಲಿನವನು ನೀನೇ! ಆದರೆ ಈ ವಿಷಯ ಐದು ಸಾವಿರ ವರ್ಷಗಳ ಪೂರ್ವವೇ ಭಗವದ್ಗೀತೆಯಲ್ಲಿರುವ ರಾಜವಿದ್ಯಾ ರಾಜಗುಹ್ಯ ಯೋಗವೆನ್ನುವ ಅಧ್ಯಾಯದಲ್ಲಿ 13ನೇ ಶ್ಲೋಕದಲ್ಲಿ ಮೇಘಗಳು ಜ್ಞಾನವನ್ನು ಹೇಳುತ್ತವೆ ಎಂದು ನಾಂದಿ ಹೇಳಲಾಗಿದೆ. ನಂತರ ಭಗವದ್ಗೀತೆಯಲ್ಲಿನ ವಿಷಯವನ್ನೇ ಬೈಬಲ್ ಸುವಾರ್ತೆಗಳಲ್ಲಿಯೂ, ಖುರಾನ್ ಆಯತ್‌ಗಳಲ್ಲಿಯೂ ಹೇಳಲಾಗಿದೆ. ಇಂದಿಗೂ ಮೂರು ಸಲ ಮೂರು ದೈವ ಗ್ರಂಥಗಳಲ್ಲಿ ಮೇಘಗಳ, ಗುಡುಗುಗಳ ಪ್ರಸ್ತಾವನೆ ಬಂದರೂ ಅದು ನಮಗೆ ಯಾವ ಮಾತ್ರ ಅರ್ಥ ವಾಗದಂತೆ ಹೋಗಿದೆ. ನಿಮಗೆ ಅರ್ಥವಾಗದ ವಿಷಯವನ್ನೇ ನಾನು ಹೇಳುತ್ತಿದ್ದೇನೆ ಹೊರತು, ನಾನು ಹೊಸದಾಗಿ ಹೇಳುವುದಲ್ಲ. ನನಗೆ ಈ ವಿಷಯ ಹಳೆಯದಾಗಿಯೇ ಇದ್ದರೂ ನಿಮಗೆ ಹೊಸದಾಗಿರುವುದರಿಂದ ಶ್ರದ್ಧೆಯಿಂದ, ವಿವೇಕದಿಂದ ಬುದ್ಧಿಯೊಂದಿಗೆ ಕೇಳಬೇಕೆಂದು ತಿಳಿಸುತ್ತಿದ್ದೇವೆ.

ಆಕಾಶ ಸಾಧಾರಣವಾಗಿ ಕಾಣಿಸದೇ ಹೋದರೂ ಅವಶ್ಯವಿದ್ದಾಗ ಮೇಘಗಳಾಗಿ ಬದಲಾಗಿ ಕಾಣಿಸುತ್ತಿವೆ. ಕಾಣಿಸುವುದಕ್ಕೆ ಮಾತ್ರವೇ ಆಕಾಶ ಮೇಘಗಳಾಗಿ ಬದಲಾಗುತ್ತಿಲ್ಲ. ಆಕಾಶ ಅನೇಕ ಕಾರ್ಯಗಳನ್ನು ಮಾಡುವುದಕ್ಕೆ ಮೇಘಗಳಾಗಿ ಬದಲಾಗುತ್ತಿದೆ. ಪ್ರಕೃತಿಗೆ ರೂಪವಿದೆ, ಪ್ರಕೃತಿ ಕೆಲಸ ಮಾಡುತ್ತಿದೆಯೆನ್ನುವ ಸೂತ್ರವನ್ನನುಸರಿಸಿ, ಪ್ರಕೃತಿಯಲ್ಲಿನ ಭಾಗವಾದ ಆಕಾಶ ಅವಶ್ಯವಿದ್ದಾಗ ಮಾತ್ರ ರೂಪವನ್ನು ಧರಿಸುತ್ತಿದೆ, ಕಾರ್ಯಗಳನ್ನು ಮಾಡುತ್ತಿದೆ. ಆಕಾಶ ಮೇಘರೂಪದಲ್ಲಿ ಮಾಡುವ ಕಾರ್ಯಗಳೆಲ್ಲವೂ ಮನುಷ್ಯರಿಗೆ ತಿಳಿದಿಲ್ಲ. ಆದರೆ ಮೇಘಗಳು ಗುಡುಗುವುದು, ಮಿಂಚುವುದು ಮಾಡುವುದಲ್ಲದೆ, ಆಕಾಶದಿಂದ ಸಿಡಿಲುಗಳನ್ನು ಬಿಡುತ್ತಿದೆ, ಹಾಗೆಯೇ ಮೇಲಿಂದ ಮಳೆಯನ್ನು ಸುರಿಸುವುದು ಎಲ್ಲರಿಗೂ ತಿಳಿದಿರುವವೇ, ಎಲ್ಲರೂ ನೋಡುವವೇ. ಮಳೆ

ಬಂದ ಪ್ರತಿ ಸಲ ಮೇಘಗಳ ಗುಡುಗುಗಳು, ಮಿಂಚುಗಳು, ಸಿಡಿಲು ಇರುವುದಿಲ್ಲ. ಗುಡುಗು ಇಲ್ಲದಂತೆ ಮಳೆ ಬರುತ್ತದೆ. ಆದರೆ ಮೇಘಗಳು ಬಾರದಂತೆ ಮಳೆ ಬರುವುದಿಲ್ಲ. ಎಲ್ಲರಿಗೂ ತಿಳಿಯುವಂತೆ ಮೇಘಗಳ ಸ್ಪಂದನೆ ನಾಲ್ಕು ವಿಧಗಳಾಗಿ ಇದೆ. ಗುಡುಗುವುದು, ಮಿಂಚುವುದು, ಸಿಡಿಲು ಬೀಳುವುದು ಮತ್ತು ಮಳೆ ಬರುವುದು ಪ್ರತಿ ವರ್ಷ ನಡೆಯುತ್ತಲೇ ಇವೆ.

'ಗುಡುಗುವುದು' ಎಂದರೆ ಜೋರಾಗಿ ಹೇಳುವುದೆಂದು ಹೇಳಬಹುದು. ಅಜ್ಞಾನದಲ್ಲಿರುವ ಮನುಷ್ಯ ನಿಧಾನವಾಗಿ ಹೇಳಿದರೆ ಕೇಳುವುದಿಲ್ಲ, ಎಷ್ಟು ಒಳ್ಳೆಯದಾಗಿ ಹೇಳಿದರೆ ಆ ಮಾತುಗಳನ್ನು ಲೆಕ್ಕಿಸುವುದಿಲ್ಲ. ಆದ್ದರಿಂದ ಅಜ್ಞಾನಿಗೆ ಜೋರಾಗಿ ಗದ್ದಲಿಸಿ ಹೇಳಬೇಕಾಗಿರುತ್ತದೆ. ಗದ್ದಲಿಸಿ ಹೇಳಿದರೇನೆ ಎಲ್ಲಿಯಾದರೂ ಕೆಟ್ಟದು ಒಳ್ಳೆಯದಾಗಿ ಬದಲಾಗುತ್ತದೆ. ಅದೇ ವಿಧಾನವನ್ನು ಅನುಸರಿಸುತ್ತಾ ಮೇಘಗಳು ಜೋರಾಗಿ ಗದ್ದಲಿಸಿ ಶಬ್ದವನ್ನು ಮಾಡಿವೆ. ಆ ಶಬ್ದ ಮನುಷ್ಯರಿಗೆ ಅರ್ಥವಾಗಲಿಲ್ಲ. ಮೇಘಗಳು ಜೋರಾಗಿ ಗುಡುಗಿ ಶಬ್ದರೂಪವಾಗಿ ಹೇಳಿರುವುದು ಎಲ್ಲವೂ ದೈವ ಜ್ಞಾನವೇ ಎನ್ನುವುದಕ್ಕೆ ಅಂತಿಮ ದೈವ ಗ್ರಂಥದಲ್ಲಿ ಸ್ವಚ್ಛವಾದ ಸಾಕ್ಷಿ ಇದೆ. ದೈವಗ್ರಂಥವಾದ ಖುರಾನ್‌ನಲ್ಲಿ 21ನೇ ಸೂರಾ 32ನೇ ಆಯತ್‌ನಲ್ಲಿ ಹೀಗೆ ಇದೆ ನೋಡಿರಿ. **(21–32) "ನಾವು ಆಕಾಶವನ್ನು ಸುರಕ್ಷಿತವಾದ ಹೊದಿಕೆಯಂತೆ ಮಾಡಿದ್ದೇವೆ. ಆದರೂ ಅವರು ಅದರಲ್ಲಿನ ಸೂಚನೆಗಳಕಡೆ (ಆಯತ್‌ಗಳಕಡೆ) ವಿಮುಖರಾಗುತ್ತಿದ್ದಾರೆ."** ಈ ಆಯತ್‌ನಲ್ಲಿ ಮೊದಲೇ ಆಕಾಶದಿಂದ ಜ್ಞಾನ ತಿಳಿದರೂ, ಮನುಷ್ಯರು ಅದನ್ನು ಗ್ರಹಿಸುವುದರಲ್ಲಿ ಆಸಕ್ತಿಯಿಂದ ಇಲ್ಲದೇ ವಿಮುಖರಾಗಿದ್ದಾರೆಂದು ಹೇಳಿದ್ದಾರೆ. ಈ ಮಾತನ್ನನು ಸರಿಸಿ ಮೇಘಗಳು ಜ್ಞಾನವನ್ನು ಹೇಳುತ್ತಿವೆಯೆಂದು, ಮೇಘಗಳಾಗಿರುವುದರಿಂದ ಮೇಘಗಳ ಭಾಷೆಯಾದ ಶಬ್ದರೂಪದಲ್ಲಿ ಹೇಳುತ್ತಿವೆಯೆಂದು ತಿಳಿದಿದೆ. ಅದೇ ವಿಷಯವನ್ನೇ ನಾವು ಈಗ ಹೇಳುತ್ತಿದ್ದೇವೆ, ಅಷ್ಟೇ ಹೊರತು ನಾವು ಯಾವುದೂ ಕಲ್ಪನೆಮಾಡಿ ಹೇಳಲಿಲ್ಲ.

ಗುಡುಗು ನಂತರ ಮಿಂಚು ಸಹ ಆಕಾಶದಲ್ಲಿ ಕಾಣಿಸುತ್ತಿರುತ್ತದೆ. ಗುಡುಗಿನಿಂದ ಎಂದರೆ ಗಟ್ಟಿಯಾಗಿ ಹೇಳಿದ ಜ್ಞಾನ ಮನುಷ್ಯನಲ್ಲಿ ಸೇರಿದರೆ ಜ್ಞಾನ ಅಗ್ನಿಯಾಗಿ ಬದಲಾಗಬಲ್ಲದು. ಅಗ್ನಿ ಬೆಳಕಿನಿಂದ ಕೂಡಿಕೊಂಡಿರುವಂತೆ ಜ್ಞಾನಾಗ್ನಿಯೂ ಸಹ ಬೆಳಕಿನಿಂದಲೇ ಇದೆ. ಅಂದರೆ ಮನುಷ್ಯನಿಗೆ ತಿಳಿದ ದೈವಜ್ಞಾನವು, ಮೇಘಗಳಿಂದ ಹೇಳಲ್ಪಟ್ಟ ಜ್ಞಾನ ಪ್ರಕಾಶವಂತವಾದುದೆಂದು ತಿಳಿಯುವಂತೆ ಗುಡುಗು ಬಂದಾಗ ಮಿಂಚು ಸಹ ಬರುತ್ತದೆ. ಕೇಳಿಸುವ ಜ್ಞಾನ ಅಗ್ನಿಯಾಗಿದೆಯೆಂದು ಕರ್ಮಗಳನ್ನು ದಹಿಸುವ ಪ್ರಕಾಶ ಇರುವುದೆಂದು ತಿಳಿಸುವ ಸಲುವಾಗಿ ಗುಡುಗು ನಂತರ ಮಿಂಚು ಸಹ ಬರುತ್ತಿವೆ. ಗುಡುಗು, ಮಿಂಚು ಮಾತ್ರವೇ ಅಲ್ಲದೆ, ಅಲ್ಲಲ್ಲಿ ಸಿಡಿಲು ಬೀಳುವುದು ಸಹ ನಡೆಯುತ್ತಿರುತ್ತದೆ. ಬೋಧಕನಿಂದ ಜ್ಞಾನ ತಿಳಿದವರು ಜ್ಞಾನದ ಪ್ರಕಾರ ನಡೆದುಕೊಳ್ಳುವುದಾದರೆ ಜ್ಞಾನ ಅಗ್ನಿಯ ಹಾಗೆ ತಯಾರಾಗುತ್ತದೆ. ಅಗ್ನಿಯಂತೆ ತಯಾರಾದ ಜ್ಞಾನ ಶಕ್ತಿ ಮನುಷ್ಯನಲ್ಲಿನ ಕರ್ಮಗಳನ್ನು ಭಸ್ಮೀಪಟಲ ಮಾಡುತ್ತದೆ. ಕರ್ಮವನ್ನು ಎಂದರೆ ಪಾಪಗಳನ್ನು ಮತ್ತು ಪುಣ್ಯಗಳನ್ನು ಜ್ಞಾನಾಗ್ನಿ ಇಲ್ಲದಂತೆ ಮಾಡುತ್ತದೆ ಎನ್ನುವುದಕ್ಕೆ ಗುರುತಾಗಿ ಸಿಡಿಲು ಆಕಾಶದಿಂದ ಬೀಳುತ್ತಿವೆ. ಜ್ಞಾನಾಗ್ನಿ ಎನ್ನುವ ಜ್ಞಾನ ಶಕ್ತಿ ಮನುಷ್ಯನಲ್ಲಿನ ಕರ್ಮಗಳನ್ನು ಸುಟ್ಟುಹಾಕುತ್ತಿದೆಯೆಂದು, ಎಂತಹ ಪಾಪವಾದರೂ ಸುಟ್ಟು ಬೂದಿಮಾಡುತ್ತಿದೆಯೆಂದು ತಿಳಿಸುವ ಸಲುವಾಗಿ ಪ್ರತ್ಯಕ್ಷವಾಗಿ ಸಿಡಿಲು ಬೀಳುತ್ತಿವೆ. ಜ್ಞಾನಶಕ್ತಿ ಇರುವಕಡೆ 'ಕರ್ಮ ದಹನ' ಎಂದು ತಿಳಿಯುವಂತೆ ಸಿಡಿಲು ಬಿದ್ದಿರುವ ಕಡೆ ಏನಿದ್ದರೂ ಬೂದಿಯಾಗುತ್ತಿದೆ. ಮನುಷ್ಯರಾಗಲೀ, ಪ್ರಾಣಿಗಳಾಗಲಿ ಸಿಡಿಲು ಬಿದ್ದಿರುವ ಕಡೆ ಇದ್ದರೆ ಸುಟ್ಟು ಕಪ್ಪಾಗಿ ಬದಲಾಗಿ ಹೋಗುತ್ತಿವೆ. ಸಿಡಿಲು ತಾಕುವುದರಿಂದ ಯಾವುದಿದ್ದರೂ ಸತ್ತುಹೋಗುವುದು ನಡೆಯುತ್ತಿದೆ. ಸಿಡಿಲು ನಾಶವನ್ನು ಸೃಷ್ಟಿಸುವುದನ್ನು ಗಮನಿಸಿದರೇ ಜ್ಞಾನಾಗ್ನಿ ಕರ್ಮವನ್ನು ಈ ರೀತಿಯಾಗಿ ಸುಟ್ಟುಹಾಕುತ್ತದೆಂದು, ಅಥವಾ ಇಲ್ಲದಂತೆ ಮಾಡುತ್ತದೆ ಎಂದು ತಿಳಿಸುವ ಸಲುವಾಗಿ ಪ್ರತ್ಯಕ್ಷವಾಗಿ ಹಾಗೆ ನಡೆಯುತ್ತಿದೆಯೆಂದು ತಿಳಿಯುತ್ತಿದೆ.

ಆಕಾಶದಿಂದ ಗಟ್ಟಿಯಾಗಿ ಗುಡುಗುಗಳು ಗುಡಿಗಿದಾಗ, ಪ್ರಕಾಶವಾಗಿ ಮಿಂಚು ಪ್ರಕಾಶಿಸುವುದಕ್ಕೂ, ಸಿಡಿಲು ಬೀಳುವುದಕ್ಕೂ ಆಧ್ಯಾತ್ಮಿಕದ ಪ್ರಕಾರ ಪರೋಕ್ಷವಾಗಿ ಇರುವ ವಿಷಯವನ್ನು ಪ್ರತ್ಯಕ್ಷವಾಗಿ ನೋಡಿದಂತಾಗಿದೆ. ಅಷ್ಟೇ ಅಲ್ಲದೆ ಗುಡುಗು, ಮಿಂಚು, ಸಿಡಿಲುಗಳು ಬಿದ್ದನಂತರ ದೇವರು ಅದೇ ಕೆಲಸದಂತೆ ಮನುಷ್ಯ ಜ್ಞಾನವನ್ನು ತಿಳಿಯುವುದಕ್ಕೆ ಇವು ಅವಶ್ಯವೆಂದು ಅನುಕ್ರಮವು ತಿಳಿಸುವುದಕ್ಕೆ ದೇವರು ಹಾಗೆ ಮಾಡಿದ್ದಾನೆಂದು ಪ್ರತ್ಯಕ್ಷವಾಗಿ ತೋರಿಸಿದ್ದಾನೆಂದು ಅರ್ಥವಾಗುತ್ತಿದೆ. ಮನುಷ್ಯ ಕರ್ಮವನ್ನು ಜ್ಞಾನವೆನ್ನುವ ಅಗ್ನಿ ಸುಟ್ಟುಹಾಕಿ, ಬೂದಿ ಮಾಡಿದಾಗ, ಕರ್ಮ ಕ್ಷಯ ನಡೆಯುತ್ತಿರುವಾಗ, ಮನುಷ್ಯನಲ್ಲಿನ ಕರ್ಮವೆಲ್ಲವೂ ಮುಗಿದುಹೋದಾಗ ಮನುಷ್ಯ ಮೋಕ್ಷವನ್ನು ಹೊಂದುವನು. ಅಂತಹವನು ಪುನಃ ಜನ್ಮಿಸುವುದಿಲ್ಲ ಅಗ್ನಿ ಮಿಂಚಿನಂತೆ, ಸಿಡಿಲು ಸುಡುವ ಶಕ್ತಿಯಂತೆ ಕಾಣಿಸಿದರೂ, ಮನುಷ್ಯ ಮೋಕ್ಷ ಹೊಂದಿದ ನಂತರ, ಕರ್ಮವೆಲ್ಲವೂ ಮುಗಿದು ಹೋದ ನಂತರ ಇನ್ನು ಜ್ಞಾನವೆನ್ನುವ ಅಗ್ನಿಯಿಂದ ಕೆಲಸವಿಲ್ಲ ಎನ್ನುವಂತೆ ಅಗ್ನಿಗೆ ವಿರುದ್ಧವಾದ ನೀರು ಮಳೆಯಂತೆ ಬರುತ್ತಿದೆ. ಕರ್ಮವೇ ಇಲ್ಲದಿರುವಾಗ ಜ್ಞಾನಾಗ್ನಿಯೇ ಅವಶ್ಯವಿಲ್ಲ, ಅವನು ಮೋಕ್ಷವನ್ನು ಹೊಂದಿದ್ದಾನೆ. ಆದ್ದರಿಂದ ಅಗ್ನಿಗೆ ಸಂಬಂಧವಿಲ್ಲದ ನೀರನ್ನು ಮಳೆಯಂತೆ ಸುರಿಸಿದ್ದಾನೆಂದು ತಿಳಿಯುತ್ತಿದೆ.

ದೇವರು ತನ್ನ ಆಕಾಶದಿಂದ ಜ್ಞಾನವನ್ನೇ ತಿಳಿಸುತ್ತಿದ್ದಾನೆಂದು ನಾನು ಈದಿನ ತಿಳಿಸುತ್ತಿದ್ದೇನೆ. ಕೆಲವರು ನನ್ನ ಮಾತುಗಳನ್ನು ನಂಬಬಹುದು, ನಂಬದಿರಬಹುದು. ನಾನು ಯೋಗೀಶ್ವರನೆಂದು ತಿಳಿದವರು ನನ್ನ ಮಾತು ಸತ್ಯವೇ ಎಂದು ತಿಳಿಯಬಲ್ಲನು. ನಾನು ಎಂತಹವನು ಎಂದು ತಿಳಿಯದವನು ನನ್ನ ಮಾತುಗಳನ್ನು ನಂಬದಿರಬಹುದು. ಆದರೆ ನೀವು ನಂಬುವುದಕ್ಕೆ ಬಲ ಕೈಗೂಡುವುದಕ್ಕೂ ಅಂತಿಮ ದೈವ ಗ್ರಂಥದಲ್ಲಿ ಮೊದಲೇ 1400 ವರ್ಷಗಳ ಕೆಳಗೆ ಹೇಳಿದ ಕೆಲವು ಮಾತುಗಳನ್ನು ಗಮನಿಸಿರೆಂದು ಹೇಳುತ್ತಿದ್ದೇವೆ. ಅಂತಿಮ ದೈವಗ್ರಂಥವಾದ ಖುರಾನ್‌ನಲ್ಲಿ 13ನೇ ಸುರಾದಲ್ಲಿ ಆಯತ್ 2, 12, 13 ರಲ್ಲಿ

ಏನಿದೆಯೋ ನೋಡೋಣ. **(13–2) "ನೀವು ನೋಡುತ್ತಿದ್ದೀರಲ್ಲವೆ! ಆಕಾಶಗಳನ್ನು ಸ್ಥಂಬಗಳಿಲ್ಲದಂತೆ ನಿಲ್ಲಿಸಿದ ಆತನು ಅಲ್ಲಾಹ್‌ನೇ. ಆನಂತರ ತನ್ನ ಸಿಂಹಾಸನದಲ್ಲಿ ಆಸೀನನಾಗಿದ್ದಾನೆ. ಮತ್ತು ಆತನು ಸೂರ್ಯ ಚಂದ್ರರನ್ನು ತನ್ನ ನಿಯಮಕ್ಕೆ ಬದ್ಧನಾಗಿ ಮಾಡಿದ್ದಾನೆ. ಪ್ರತಿಯೊಂದು ತನ್ನ ನಿರ್ಣಯದ ಕಾಲದಲ್ಲಿ ಪ್ರಯಾಣಿಸುತ್ತಾ ಇರುತ್ತದೆ. ಆತನು ಎಲ್ಲ ವ್ಯವಹಾರಗಳನ್ನು ನಡೆಸುತ್ತಾ ತನ್ನ ಸೂಚನೆಗಳನ್ನು ವಿವರಿಸುತ್ತಿದ್ದಾನೆ. ಬಹುಶಃ ಈ ವಿಧವಾಗಿಯಾದರೂ ನೀವು ದೇವರನ್ನು ಸೇರಬೇಕೆನ್ನುವ ವಿಷಯವನ್ನು ನಂಬುತ್ತೀರೆಂದು"**

ಈ ವಾಕ್ಯದ ಕೊನೆಯಲ್ಲಿ **"ತನ್ನ ಸೂಚನೆಗಳನ್ನು ವಿವರಿಸುತ್ತಿದ್ದಾನೆ"** ಎಂದು ಇದೆ. ಇನ್ನೊಂದು ಗ್ರಂಥದಲ್ಲಿ ಇದೇ ವಾಕ್ಯದಲ್ಲಿ ಕೊನೆಯ **"ನೀವು ನಿಮ್ಮ ಪ್ರಭುವನ್ನು (ದೇವರನ್ನು) ಸೇರುವ ವಿಷಯವನ್ನು ನಂಬುವುದಕ್ಕೆ ಆತನು ತನ್ನ ನಿದರ್ಶನಗಳನ್ನು ಸ್ಪಷ್ಟವಾಗಿ ವಿವರಿಸುತ್ತಿದ್ದಾನೆ"** ಎಂದು ಇದೆ. ಒಂದು ಗ್ರಂಥದಲ್ಲಿ **"ತನ್ನ ಸೂಚನೆಗಳನ್ನು ವಿವರಿಸುತ್ತಿದ್ದಾನೆ"** ಎಂದು ಹೇಳಿದ್ದಾನೆ. ಆಕಾಶವನ್ನು ಕುರಿತು ಹೇಳಬೇಕಾಗಿರುವುದನ್ನೆಲ್ಲಾ ಹೇಳಿ ಕೊನೆಯಲ್ಲಿ ತನ್ನ ಸೂಚನೆಗಳು ಎನ್ನುವುದರಲ್ಲಿ ಅರ್ಥವನ್ನು ನೋಡಿದರೇ ಆ ಸೂಚನೆಗಳು ತನ್ನನ್ನು ಸೇರಲು ಸಲುವಾಗಿಯೇ ಆ ಸೂಚನೆಗಳು ಜ್ಞಾನ ವಚನಗಳಾಗಿವೆ ಯೆಂದು ತಿಳಿಯುತ್ತಿದೆ. ಅಂದರೆ ದೇವರು ತನ್ನ ಜ್ಞಾನವನ್ನು ಆಕಾಶದಿಂದ ತಿಳಿಸುತ್ತಿದ್ದಾ ನೆಂದು ಅಲ್ಲಿ ಹೇಳುವುದಾಗಿದೆ. ಇನ್ನೊಂದು ಗ್ರಂಥದಲ್ಲಿ **"ದೇವರನ್ನು ಭೇಟಿ ಮಾಡುವ ವಿಷಯವನ್ನು ನಂಬುವುದಕ್ಕೆ ತನ್ನ ನಿದರ್ಶನಗಳನ್ನು ಸ್ಪಷ್ಟವಾಗಿ ವಿವರಿಸುತ್ತಿದ್ದಾನೆ"** ಎಂದು ಇದೆ. ತನ್ನ ನಿದರ್ಶನೆಗಳು ಎಂದರೆ ತನ್ನ ಜ್ಞಾನ ವಿಷಯಗಳೆಂದು ಅರ್ಥ. ತನ್ನನ್ನು ಭೇಟಿಮಾಡುವ ನಿಮಿತ್ತ ದೇವರು ತನ್ನ ಜ್ಞಾನವನ್ನು ಆಕಾಶದಂದ ತಿಳಿಸಿದ ಹಾಗೆ ಈ ವಾಕ್ಯಗಳಿಂದ ತಿಳಿಯುತ್ತಿದೆ. ಅದೇ 13ನೇ ಸುರಾದಲ್ಲಿ 12 ಆಯತ್‌ನಲ್ಲಿ ಹೀಗೆ ಇದೆ. **(13–12) "ಆತನು ನಿಮಗೆ ಭಯವು, ಆಸೆ ಉಂಟುಮಾಡುವುದಕ್ಕೆ ಮಿಂಚುಗಳನ್ನು ತೋರಿಸುತ್ತಿದ್ದಾನೆ. ಆತನೇ ಬಾರವಾದ ಮೇಘಗಳನ್ನು ಸೃಜಿಸುತ್ತಿದ್ದಾನೆ". (13–13) "ಗುಡುಗು ಸಹಿತ ಆತನ ಪವಿತ್ರತೆಯನ್ನು ಕೊಂಡಾಡುತ್ತದೆ. ಆತನನ್ನು ಪ್ರಶಂಸಿಸುತ್ತದೆ. ದೂತರು**

**ಸಹ ಆತನನ್ನು ಸ್ತುತಿಸುತ್ತಿದ್ದಾರೆ. ಆತನು ಸಿಡಿಲನ್ನು ಕಳುಹಿಸಿ ತಾನು ಕೋರಿದವರ ಮೇಲೆ ಬೀಳಿಸುತ್ತಿದ್ದಾನೆ. ಅವಿಶ್ವಾಸರು ಅಲ್ಲಾಹ್ ವಿಷಯದಲ್ಲಿ ಪೀಡುವಾದಕ್ಕೆ ಇಳಿಯುತ್ತಿದ್ದಾರೆ. ಆತನು ಮಹಾ ಶಕ್ತಿವಂತನು"** ಈ ವಾಕ್ಯದಲ್ಲಿ ಗುಡುಗು ಸಹಿತ ಆತನ ಪವಿತ್ರತೆಯನ್ನು ಕೊಂಡಾಡುತ್ತದೆ ಎಂದು ಇದೆ. ಅದರ ಭಾವ ಗುಡುಗುಗಳಿಂದ ಬರುವ ಶಬ್ದ ಜ್ಞಾನದಿಂದ ತುಂಬಿದೆಯೆಂದು ಅರ್ಥ. ಆತನ ಪವಿತ್ರತೆಯನ್ನು ಕೊಂಡಾಡುವುದೆಂದರೇ ಆತನ ಜ್ಞಾನವನ್ನು ಹೇಳುವುದೆಂದು ಅರ್ಥ. ಅಷ್ಟೇ ಅಲ್ಲದೆ ದೇವರು ಅಂದುಕೊಳ್ಳುವವರ ಕರ್ಮವನ್ನು ಇಲ್ಲದಂತೆ ಮಾಡುತ್ತಾನೆಂದು ಹೇಳುವ ಸೂಚನೆಯಾಗಿ, ಆತನು ಅಂದುಕೊಂಡವರ ಮೇಲೆ ಸಿಡಿಲನ್ನು ಬೀಳಿಸುತ್ತಿದ್ದಾನೆಂದು ಹೇಳುತ್ತಿದ್ದಾರೆ. ಸುರಾ 21, ಆಯತ್ 32ರಲ್ಲಿ ಆಕಾಶದಿಂದ ಬರುವ ಜ್ಞಾನವನ್ನು ಮನುಷ್ಯರು ತಿಳಿಯದಂತಿದ್ದಾರೆಂದು ಇಲ್ಲಿ ಹೇಳುವುದಾಗಿದೆ. **(21–32) "ನಾವು ಆಕಾಶವನ್ನು ಸುರಕ್ಷಿತವಾದ ಹೊದಿಕೆಯಂತೆ ಮಾಡಿದ್ದೇವೆ. ಆದರೂ ಅವರು ಅದರಲ್ಲಿನ ಸೂಚನೆಗ (ಆಯತ್‌ಗ) ಳಿಂದ ವಿಮುಕ್ತರಾಗುತ್ತಿದ್ದಾರೆ".** ಈ ವಾಕ್ಯ "ಕನ್ನಡ ಭಾಷೆಯಲ್ಲಿನ ದಿವ್ಯ ಖುರಾನ್ ಸಂದೇಶ" ಎನ್ನುವ ಗ್ರಂಥದಲ್ಲಿ ಇದೆ. ಆಕಾಶದಿಂದ ದೈವ ಸೂಚನೆಗಳಾದ ಜ್ಞಾನವನ್ನು ತಿಳಿಯುವುದಕ್ಕೆ ಕೆಲವರು ವಿಮುಖರಾಗಿದ್ದಾರೆಂದು ಹೇಳಿದ್ದಾರೆ. ಇಲ್ಲಿ ಸ್ಪಷ್ಟವಾಗಿ ಆಕಾಶದಿಂದ ಜ್ಞಾನ ತಿಳಿಯಲಾಗುತ್ತಿದೆಯೆಂದು ಅರ್ಥವಾಗುತ್ತಿದೆ.

ಅದೇ ಖುರಾನ್ ಗ್ರಂಥದಲ್ಲಿ 27ನೇ ಸುರಾ, 75 ನೇ ಆಯತ್‌ನಲ್ಲಿ ಆಕಾಶದಿಂದ ಬೋಧನೆ ರೂಪದಲ್ಲಿ ಬಂದಿರುವ ಜ್ಞಾನವನ್ನು ಮತ್ತು ಭೂಮಿ ಮೇಲೆ ಮನುಷ್ಯರು ಗ್ರಂಥಿಯಿಂದ ಬಂದಿರುವ ಜ್ಞಾನವು ಎರಡು ದೈವಗ್ರಂಥಗಳಲ್ಲಿ ಬರೆಯಲಾಗಿದೆಯೆಂದು ಹೇಳಿದ್ದಾರೆ ನೋಡಿರಿ. **(27–75) "ಆಕಾಶದಲ್ಲಿ ಮತ್ತು ಭೂಮಿಯಲ್ಲಿ ಅಗೋಚರವಾಗಿ ಇರುವುದು ಯಾವುದೂ ಸಹ ಸ್ಪಷ್ಟವಾದ ಒಂದು ಗ್ರಂಥದಲ್ಲಿ ಬರೆಯಲಾರದಂತೆ ಇಲ್ಲ."** ಸುರಾ 13, 21, 27ರಲ್ಲಿನ ವಾಕ್ಯಗಳಲ್ಲಿ ಆಕಾಶವೊಂದರ ರಹಸ್ಯವೆಲ್ಲವನ್ನೂ ಹೇಳಿದಂತಿದೆ. ನಾನು ಈ ದಿನ ಆಕಾಶ

ಮೇಘಗಳಿಂದ ಬರುವ ಗುಡುಗುಗಳಲ್ಲಿ ಎಷ್ಟೋ ಜ್ಞಾನವಿದೆಯೆಂದರೆ ನಂಬಲಾರದವರು 1400 ವರ್ಷಗಳ ಕೆಳಗೆ ಹೇಳಿದ ಖುರಾನ್ ಗ್ರಂಥದಲ್ಲಿ ದೇವರು ಹೇಳಿದ ಜ್ಞಾನವನ್ನು ತಪ್ಪದೆ ನಂಬಬೇಕಾಗಿರುತ್ತದೆ. ದೇವರು ತಾನು ಯಾರನ್ನು ಮೋಕ್ಷಕ್ಕೆ ಕಳುಹಿಸಬೇಕೋ ನಿರ್ಣಯಿಸಿ ಆತನಿಗೆ ಇಷ್ಟವಾದವರನ್ನು ಮೋಕ್ಷಕ್ಕೆ ಕಳುಹಿಸುವನೆಂದು ಹೇಳುವಂತೆ **'ತಾನು ಕೋರಿದವರ ಮೇಲೆ ಸಿಡಿಲನ್ನು ಬೀಳಿಸುತ್ತಿದ್ದಾನೆ'** ಎಂದು (13–13) ರಲ್ಲಿ ಹೇಳಲಾಗಿದೆ. **"ದೇವರು ಅಂದು ಕೊಂಡರೇ ಯಾರ ಕರ್ಮ ಎಷ್ಟಿದ್ದರೂ, ಯಾರ ಪಾಪ ಎಷ್ಟಿದ್ದರೂ ಅವರ ಕರ್ಮವೆಲ್ಲವನ್ನೂ ಒಂದೇ ಸಲ ಕ್ಷಮಿಸುತ್ತಾನೆ"**. ಅದೇ ವಿಷಯವನ್ನೇ ಬಾಹ್ಯವಾಗಿ ಅಂತರಾರ್ಥದಿಂದ ತುಂಬಿಸಿ ಸಿಡಿಲು ಬೀಳುವಂತೆ ಮಾಡುತ್ತಿದ್ದಾನೆ. ಪ್ರತ್ಯಕ್ಷ ಜ್ಞಾನವನ್ನು ಗುರುವಿನ (ಭಗವಂತನ) ರೂಪದಲ್ಲಿ ಬೋಧಿಸುವ ದೇವರು, ತನ್ನ ಜ್ಞಾನವನ್ನು ಸೃಷ್ಟಿ ಆದಿಯಲ್ಲಿಯೇ ವಾಣಿಯಾಗಿ (ಶಬ್ದ ರೂಪದಲ್ಲಿ) ತಿಳಿಸಿದ್ದಾನೆ. ಈ ವಿಷಯವನ್ನು ಹೇಳುತ್ತಾ ಆಕಾಶದಿಂದ ಬಂದಿರುವ ಶಬ್ದ ರೂಪ ಜ್ಞಾನವು, ಭೂಮಿ ಮೇಲೆ ಮನುಷ್ಯರಿಂದ ಬರವಣಿಗೆ ರೂಪದಲ್ಲಿ ಬಂದ ಜ್ಞಾನವನ್ನು ಕುರಿತು ಹೇಳುತ್ತಾ ಜ್ಞಾನ ಶಕ್ತಿ ಕಣ್ಣಿಗೆ ಕಾಣಿಸುವುದಲ್ಲವೆಂದು ಅದೇ ಜ್ಞಾನಶಕ್ತಿಯಿರುವ ಜ್ಞಾನವನ್ನು ಅಂದರೇ ಅಗೋಚರವಾದ ಜ್ಞಾನ ಶಕ್ತಿಯನ್ನು ಸ್ಪಷ್ಟವಾದ ದೈವಗ್ರಂಥದಲ್ಲಿ ತುಂಬಿಸಿ ಬರೆಯಲಾಗುತ್ತಿದೆಯೆಂದು ತಿಳಿಸುತ್ತಾ (27–75) ವಾಕ್ಯದಲ್ಲಿ ಅಗೋಚರವಾಗಿ ಇರುವುದು ಯಾವುದೇ ಆದರೂ ಗ್ರಂಥದಲ್ಲಿ ಬರೆಯಲಾರದಂತೆ ಇರಲಿಲ್ಲ ಎಂದು ಹೇಳಿದ್ದಾನೆ. ಇದೆಲ್ಲವೂ ಅಂತಿಮ ದೈವ ಗ್ರಂಥವಾದ ಖುರಾನ್ ಗ್ರಂಥದಲ್ಲಿ ಹೇಳಿದ್ದಾರೆ. ದೇವರು ತನ್ನ ಜ್ಞಾನವನ್ನು ಮೂರು ಗ್ರಂಥಗಳಲ್ಲಿ ಹೇಳಿದ್ದಾರಾದ್ದರಿಂದ ಮತ್ತೊಂದು ಗ್ರಂಥದಲ್ಲಿ ಏನಿದೆಯೋ ನೋಡೋಣ.

ಮೊದಲು ತಯಾರಾದ ಭಗವದ್ಗೀತಾ ಗ್ರಂಥದಲ್ಲಿಯೇ ಆಕಾಶವೊಂದರ ಸಾರಾಂಶ ಹೇಳಿದ್ದಾರೆ. ದೈವ ಸಂಬಂಧ ಪ್ರಕೃತಿಯೆಂದು ರಾಜವಿದ್ಯಾ ರಾಜಗುಹ್ಯ ಯೋಗದಲ್ಲಿ 13ನೇ ಶ್ಲೋಕದಲ್ಲಿ ಹೇಳಿದ್ದಾರೆ.

**13. ಶ್ಲೋ॥ ಮಹಾತ್ಮಾನಸ್ತು ಮಾಂ ಪಾರ್ಥ! ದೈವೀಂ ಪ್ರಕೃತಿ ಮಾಶ್ರಿತಾಃ ।**
**ಭಜಂತ ನನ್ಯ ಮನಸೋ ಜ್ಞಾತ್ವಾ ಭೂತಾದಿ ಮವ್ಯಯಮ್ ॥**

**ಭಾವಾರ್ಥ :– "ದೈವ ಪ್ರಕೃತಿಯನ್ನು ಆಶ್ರಯಿಸಿದವರು ಇತರವನ್ನು ಬಿಟ್ಟು ನನ್ನನ್ನೇ ಆರಾಧಿಸುತ್ತಾರೆ. ದೈವ ಪ್ರಕೃತಿಯಿಂದ ನಾನೇ ಜೀವರಾಶಿಗಳಿಗೆ ಅಧಿಪತಿಯಾಗಿ ನಾಶವಿಲ್ಲದವನಾಗಿ ಇದ್ದೇನೆಂದು ತಿಳಿದವರಾಗುತ್ತಾರೆ."** ದೇವರು ಸರ್ವ ಜೀವರಾಶಿಗಳಿಗೂ ಅಧಿಪತಿ ಎಂದು ನಾಶವಿಲ್ಲದವನೆಂದು ತಿಳಿದು ಆತನನ್ನೇ ಭಜಿಸುವುದು ಪ್ರಕೃತಿ ತಿಳಿಸಿದ ಜ್ಞಾನದಿಂದ ನಡೆಯುತ್ತಿದೆ. ಪ್ರಕೃತಿ ತನ್ನ ಶಬ್ದದಿಂದ ದೇವರ ಜ್ಞಾನ ತಿಳಿಸಿದೆಯೆಂದು ಜ್ಞಾನಯೋಗವೆಂಬ ಮೊದಲ ಅಧ್ಯಾಯ ದಲ್ಲಿಯೇ ಇದೆ. ನಂತರ ಅದೇ ವಿಷಯವನ್ನೇ ರಾಜವಿದ್ಯಾ ರಾಜಗುಹ್ಯ ಯೋಗವೆನ್ನುವ ಅಧ್ಯಾಯದಲ್ಲಿ 13ನೇ ಶ್ಲೋಕದಲ್ಲಿಯೂ ತಿಳಿಯಲಾಗಿದೆ. ಇನ್ನು ಇದೇ ವಿಷಯವೇ ಮಧ್ಯಮ ದೈವಗ್ರಂಥವಾದ ಬೈಬಲ್‌ವೊಂದರ ಮೂರು ಸುವಾರ್ತೆಗಳಲ್ಲಿಯೂ ಸಹ ಇದೆ. ಅದನ್ನೇ ಈಗ ಗಮನಿಸೋಣ. ಮತ್ತಾಯ ಸುವಾರ್ತೆಗಳಲ್ಲಿ 16, 17 ವಾಕ್ಯಗಳಲ್ಲಿ ಈ ರೀತಿ ಇದೆ ನೋಡಿರಿ. **(16) ಯೇಸು ಬಾಪ್ತಿಸ್ಮ ಹೊಂದಿದ ಕೂಡಲೇ ನೀರಿನಿಂದ ದಡಕ್ಕೆ ಬರುವನು. ಇದೋ ಆಕಾಶ ತೆರೆಯಲ್ಪಟ್ಟಿತು. ದೇವರ ಆತ್ಮ ಪಾರಿವಾಳದಂತೆ ಇಳಿದು ತನ್ನ ಮೇಲಕ್ಕೆ ಬರುವುದನ್ನು ನೋಡಿದನು. (17) ಮತ್ತು ಇದೋ ಈತನೇ ನನ್ನ ಪ್ರಿಯ ಕುಮಾರನು ಈತನಲ್ಲಿ ನಾನು ಆನಂದಿಸುತ್ತಿದ್ದೇನೆಂದು ಒಂದು ದೊಡ್ಡ ಶಬ್ದ ಆಕಾಶದಿಂದ ಬಂದಿತು.** ಆಕಾಶದಿಂದ ದೊಡ್ಡ ಶಬ್ದ ಬಂದಿದೆಯೆಂದು ಹೇಳುವುದನ್ನು ನೋಡಿದರೇ ಆಕಾಶ ದೊಡ್ಡದಾಗಿ ಗುಡುಗಿದೆಯೆಂದು ಅರ್ಥ. ಆಕಾಶ ಯಾವಾಗಲಾದರೂ, ಮನುಷ್ಯರ ಭಾಷೆಯಲ್ಲಿ ಮಾತನಾಡಲಿಲ್ಲ, ಎಂದಿಗೂ ಮಾತನಾಡುವುದಿಲ್ಲ. ಆಕಾಶ ತನ್ನ ಭಾಷೆಯಲ್ಲೇ ಹೇಳುತ್ತದೆ. ಆಕಾಶದ ಭಾಷೆ ಶಬ್ದ ಮಾಡುವುದೇ. ಆ ಶಬ್ದದಲ್ಲಿನ ಅಂತರಾರ್ಥವನ್ನು ಗ್ರಹಿಸುವವರಿರಬಹುದು. ಯೇಸು ಬಾಪ್ತಿಸ್ಮವು ಹೊಂದಿದ ದಿನದಂದು ಅಂದಿನ ಉದ್ದೇಶವನ್ನು ತಿಳಿಸುತ್ತಾ ಮೇಘದಿಂದ ಆಕಾಶ ಗುಡುಗಿದೆ ಅದನ್ನೇ ಈ

ವಾಕ್ಯಗಳಲ್ಲಿ ಹೇಳಿದ್ದಾರೆ. ಇದೇ ವಿಷಯವೇ ಮಾರ್ಕ ಸುವಾರ್ತ ಒಂದನೇ ಅಧ್ಯಾಯ 10, 11 ವಚನಗಳಲ್ಲಿ ಹೀಗೆ ಇದೆ.

**(10) ಆತನು ನೀರಿನಿಂದ ದಂಡೆಗೆ ಬರುತ್ತಿರುವಾಗ ಆಕಾಶ ಸೀಳಿಸಲಾಯಿತು. ಪರಿಶುದ್ಧಾತ್ಮ ಪಾರಿವಾಳದಂತೆ ತನ್ನ ಮೇಲೆ ಇಳಿದು ಬರುವುದನ್ನು ನೋಡಿದನು. (11) ನೀನು ನನ್ನ ಪ್ರಿಯ ಕುಮಾರನು, ನಿನ್ನಲ್ಲಿ ನಾನು ಆನಂದಿಸುತ್ತಿದ್ದೇನೆಂದು ಒಂದು ಶಬ್ದ ಆಕಾಶದಿಂದ ಬಂದಿತು.** ಮತ್ತಾಯ ಸುವಾರ್ತೆಯಲ್ಲಿ ಹೇಳಿದ (16) ನೇ ವಚನದಲ್ಲಿ ಆಕಾಶ ತೆರೆಯಲಾಯಿತು ಎಂದು ಇದೆ. ಮಾರ್ಕ (10) ನೇ ವಚನದಲ್ಲಿ ಆಕಾಶವನ್ನು ಸೀಳಿಸಲಾಯಿತು ಎಂದು ಸ್ವಲ್ಪ ಬದಲಾವಣೆಯಿಂದ ಹೇಳಲಾಗಿದೆ. ಆದರೆ ಎರಡೂ ಒಂದೇ ಅರ್ಥವೆಂದು ಗ್ರಹಿಸಬೇಕು. ಆಕಾಶ ತೆರೆಯಲಾಯಿತು ಅಥವಾ ಸೀಳಿಸಲಾಯಿತು ಎನ್ನುವ ಮಾತಿನಲ್ಲಿನ ಆಂತರಾರ್ಥ ಆಕಾಶ ಮಿಂಚಿದೆ ಎಂದು ಅರ್ಥ. ಆಕಾಶದಲ್ಲಿ ಮೇಘಗಳ ಮಧ್ಯದಲ್ಲಿ ಆಕಾಶತೆರೆದಂತೆ ಬಾಗಿಲು ಮರೆಯಿಂದ ಬೆಳಕು ಕಾಣಿಸಿದಂತೆ ಮಿಂಚು ಕಾಣಿಸುತ್ತಿರುತ್ತದೆ. ಆ ದಿನ ಆಕಾಶದಲ್ಲಿ ಮಿಂಚುಗಳು ಬಂದು ಗುಡುಗು ಸಹ ದೊಡ್ಡ ಶಬ್ದಗಳಾಗಿ ಕೇಳಿಸಿವೆಯೆಂದು, ಅದರಲ್ಲಿನ ಭಾವವನ್ನೇ ವಾಕ್ಯದಲ್ಲಿ ಹೇಳಿದ್ದಾರೆಂದು ಅರ್ಥವಾಗುತ್ತಿದೆ. ಆದಿನ ಮೇಘ ಶಬ್ದ ಮಾಡಿದಾಗ, ಆ ಶಬ್ದದಲ್ಲಿನ ವಿಷಯವನ್ನು ಗ್ರಹಿಸಿ ಈ ವಿಷಯವನ್ನೇ ಹೇಳಿದೆಯೆಂದು ಬರೆದಿದ್ದಾರೆಂದರೆ ಪೂರ್ವದಲ್ಲಿ ಆಕಾಶ ಗುಡುಗುಗಳ ಶಬ್ದಗಳ ಅರ್ಥವನ್ನು ಗ್ರಹಿಸುವವರಿದ್ದಾರೆಂದು ತಿಳಿಯುತ್ತಿದೆ. ಆ ದಿನಗಳಲ್ಲೇ ಅಲ್ಲದೆ ಈ ದಿನಗಳಲ್ಲಿಯೂ ಸಹ ಯಾರಾದರೂ ಅಂತಹ ಸಾಮರ್ಥ್ಯ ಇರುವವರಿರಬಹುದು.

ದೇವರು ತನ್ನ ಜ್ಞಾನವನ್ನು ಮೂರು ವಿಧಗಳಲ್ಲಿ ಭೂಮಿ ಮೇಲೆ ಮನುಷ್ಯರಿಗೆ ತಿಳಿಸುತ್ತೇನೆಂದು ಹೇಳಿದಾಗಲೇ ಒಂದು ಆಕಾಶದಿಂದ ಶಬ್ದದ ಮೂಲಕ ಹೇಳಲಾಗುತ್ತದೆಂದು ಹೇಳಿದ್ದಾನೆ. ಆದರೆ ಒಂದೇ ಸಲವೇ ಹೇಳುತ್ತಾನೆಂದು ಹೇಳಲಿಲ್ಲ. ದೇವರು ಆಕಾಶವಾಣಿಯಿಂದ ತಿಳಿಸುತ್ತೇನೆಂದು

ಹೇಳಿದ ಮಾತಿನ ಪ್ರಕಾರ ಪ್ರತಿ ವರ್ಷ ಆಕಾಶದಿಂದ ಗುಡುಗುಗಳ ಶಬ್ದದಿಂದ ಜ್ಞಾನವನ್ನು ಒಂದೇ ವಿಧವಾಗಿ ಹೇಳದಂತೆ ಬೇರೆಬೇರೆ ಜ್ಞಾನಗಳನ್ನು ತಿಳಿಸುತ್ತಿದ್ದಾನೆ. ಆದ್ದರಿಂದ ಪ್ರತಿ ವರ್ಷ ಆಕಾಶ ಶಬ್ದಗಳು ಬದಲಾಗುತ್ತಿವೆ.

ಪ್ರಕೃತಿಯಲ್ಲಿನ ಒಂದು ಭಾಗವೇ ಆಕಾಶ. "ಪ್ರಕೃತಿ ಕೆಲಸ ಮಾಡುತ್ತದೆ" ಎಂದು ಹೇಳಿದಂತೆ, ಪ್ರಕೃತಿಯಲ್ಲಿನ ಆಕಾಶವೂ ಸಹ ಅನೇಕ ಕೆಲಸಗಳು ಮಾಡುತ್ತಿದೆ. ಅನೇಕ ಕಾರ್ಯಗಳಲ್ಲಿ ದೈವಜ್ಞಾನವನ್ನು ತಿಳಿಸುವ ಕಾರ್ಯ ಬಹಳ ಮುಖ್ಯವಾದುದು. ಆದ್ದರಿಂದ ಪ್ರತಿ ವರ್ಷ ಎಷ್ಟೋ ಸ್ವಲ್ಪ ಜ್ಞಾನವನ್ನು ಭೂಮಿಮೇಲೆ ತಿಳಿಸುತ್ತಿರುವುದು ನಡೆಯುತ್ತಿದೆ. ಅನೇಕ ಕೆಲಸಗಳನ್ನು ಆಕಾಶ ನಿಶ್ಶಬ್ದವಾಗಿ ಮಾಡುತ್ತಿದೆ. ಒಂದು ಜ್ಞಾನ ತಿಳಿಸುವ ಕಾರ್ಯದಲ್ಲಿಯೇ ಗದ್ದಲಿಸಿ ಗುಡುಗುತ್ತಿದೆ. **ಪ್ರತಿ ಗುಡುಗುನಲ್ಲಿಯೂ ಜ್ಞಾನವಿದೆ. ಪ್ರತಿ ಮಿಂಚಿನಲ್ಲಿಯೂ ಜ್ಞಾನ ಶಕ್ತಿ ಇದೆ. ಪ್ರತಿ ಸಿಡಿಲಿನಲ್ಲಿಯೂ ಕರ್ಮದಹನವಿದೆ.** ಈ ವಿಷಯವನ್ನು ತಿಳಿದವನು ಶ್ರದ್ಧೆ ಹೊಂದಿದ್ದರೇ ಮೇಘವೊಂದರ ಶಬ್ದದಲ್ಲಿ ಅಡಗಿರುವ ಜ್ಞಾನವನ್ನು ಸ್ವಲ್ಪವಾದರೂ ತಿಳಿಯಬಲ್ಲನು.

ಆಕಾಶವು ತನ್ನ ಶಬ್ದದಿಂದ ಜ್ಞಾನವನ್ನು ತಿಳಿಸುವುದು ಮೊದಲು ಸೃಷ್ಟಿ ಆದಿಯಲ್ಲಿಯೇ ಪ್ರಾರಂಭವಾಗಿದೆ. ಅಂದಿನಿಂದ ಇಂದಿನವರೆಗು ಮುಂದುವರೆಯುತ್ತಿದೆ. ಇನ್ನೂ ನಡೆಯುವ ಕಾಲದಲ್ಲಿಯೂ ಸಹ ಮೇಘಗಳು ಜ್ಞಾನವನ್ನು ಹೇಳುತ್ತಿರುತ್ತವೆ. ಆದರೆ ಇಲ್ಲಿ ಇನ್ನೂ ತಿಳಿಯಬೇಕಾದ ವಿಷಯ ಮತ್ತೊಂದು ಇದೆ. ಆಕಾಶವೂ ಸಹ ಒಂದು ಭೂತವಾಗಿದೆಯೆಂದು ಮರೆಯಬಾರದು. ಭೂತವು ಎಂದರೆ ಯಾವುದೋ ದೆವ್ವವೆಂದು ತಿಳಿದುಕೊಳ್ಳ ಬಾರದು. ಭೂತ ಎಂದರೆ ಜೀವಾತ್ಮವೆಂದೇ ಅರ್ಥ. ಜೀವಾತ್ಮ ಎಲ್ಲಿರುತ್ತದೋ ಅಲ್ಲೇ ಆತ್ಮವೂ ಇರಬೇಕು. ಆಕಾಶ ಸಾಧಾರಣ ಭೂತವಲ್ಲ. ಪ್ರಪಂಚದಲ್ಲಿ ಎಲ್ಲಾ ಸಾಧಾರಣ ಜೀವರಾಶಿಗಳೇ (ಸಾಧಾರಣ ಭೂತಗಳೇ) ಆದಾಗ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಈ ಐದು ಮಹಾಭೂತಗಳಾಗಿ ಇವೆ. ಅದರಲ್ಲಿ ಆಕಾಶ ಮೊದಲನೆಯದು. ಆಕಾಶದಲ್ಲಿಯೂ ಸಹ ಆತ್ಮ ಇದೆ. ಆಕಾಶದಲ್ಲಿನ

ಆತ್ಮವೇ ಎಲ್ಲಾ ಕೆಲಸಗಳು ಮಾಡುತ್ತಿವೆ. ಮೇಲ್ನೋಟಕ್ಕೆ ಕಾಣಿಸುವುದು ಆಕಾಶವೇ ಆದರೂ ಆಕಾಶದ ಹಿಂದೆ ಅಣಗಿರುವುದು ಆತ್ಮ. ಯಾರಿಗೂ ತಿಳಿಯದಂತಿರುವ ಆತ್ಮವೇ ಶಬ್ದ ರೂಪದಲ್ಲಿ ಜ್ಞಾನವನ್ನು ಹೇಳುತ್ತಿದೆ. ಜೀವನಿಂದ ಹೇಳಲಾಗಿರುವುದಾಗಲಿ, ಮಾಡಲಾಗಿರುವುದಾಗಲಿ ಯಾವುದಾದರೂ ಆತ್ಮವೇ ಮಾಡುತ್ತಿದೆ ಆತ್ಮ ಯಾರಿಗೂ ತಿಳಿಯದೇ ಅಣಗಿರುವುದರಿಂದ ಆತ್ಮ ವಿಷಯ ಯಾರಿಗೂ ತಿಳಿದಿಲ್ಲ. ಸೃಷ್ಟಿ ಆದಿಯಲ್ಲಿ ದೈವಜ್ಞಾನವನ್ನು ಆಕಾಶದ ಮೂಲಕ ಮೇಘಗಳ ಹಿಂದೆಯಿಂದ ತಿಳಿಸಿರುವುದು ಆತ್ಮವೇಯೆಂದು ತಿಳಿಯಬೇಕು. ಎಲ್ಲದರಲ್ಲಿ ಅಡಗಿರುವ ಆತ್ಮವನ್ನು ತಿಳಿಯುವುದಕ್ಕೆ ಎಷ್ಟೋ ಜ್ಞಾನ ಅವಶ್ಯ. ದೇವರು ನಮಗೆ ಕೊಟ್ಟಿರುವ ಜ್ಞಾನದಿಂದ ಸೃಷ್ಟಿ ಆದಿಯಲ್ಲಿ ದೇವರ ಸಂಕಲ್ಪದಿಂದ ಆತ್ಮ ಮೊದಲ ಮಾತುಗಳಾಗಿ ಜ್ಞಾನವನ್ನು ಹೇಳಿದೆ. ಆದಿನ ಮೇಘ ಘರ್ಜಿಸಿದ ಶಬ್ದವೇ ಪ್ರಪಂಚಕ್ಕೆ ಮೊದಲ ಜ್ಞಾನವಾಗಿದೆ. ಆದಿನ ಹೇಳಿದ ಜ್ಞಾನವು ಸಂಪೂರ್ಣವಾದ ಜ್ಞಾನವಾಗಿರುವುದರಿಂದ ಅದೇ ಜ್ಞಾನವೇ ಪ್ರಪಂಚವೆಲ್ಲದಕ್ಕೂ ಆಧಾರವಾಗಿದೆ.

ಒಂದು ಸಂದೇಶದಿಂದ ಕೂಡಿಕೊಂಡ ಯಾವ ಶಬ್ದವಾದರೂ 'ಮಾತು' ಎನ್ನುತ್ತೇವೆ. 'ಮಾತು' ಎಂದರೆ ಮಹತ್ಯದಿಂದ ಅಥವಾ ಶಕ್ತಿಯಿಂದ ಕೂಡಿ ಕೊಂಡಿದೆ ಯೆಂದು ಅರ್ಥ. ಆದ್ದರಿಂದ "ಪ್ರತಿ ಮಾತೂ ಮಂತ್ರವೇ, ಪ್ರತಿ ಎಲೆಯೂ ಔಷಧವೇ" ಎಂಬ ನಾಣ್ನುಡಿ ಇದೆ. ಮಾತು ಪ್ರಪಂಚ ಸಂಬಂಧವಾದು ದಾಗಬಹುದು ಅಥವಾ ಪರಮಾತ್ಮ ಸಂಬಂಧವಾದುದೂ ಆಗಬಹುದು. ಸೃಷ್ಟಿ ಆದಿಯಲ್ಲಿ ಆಕಾಶ ಶಬ್ದದಿಂದ ದೈವಜ್ಞಾನ ತಿಳಿಯಲಾಗಿದೆ, ಅದುವೇ ಪ್ರಪಂಚಕ್ಕೆ ಮೊದಲ ಜ್ಞಾನವೆಂದು ತಿಳಿದಿದೆ. ಅದುವೇ ದೈವೀಕವಾಗಿ ಹೇಳಿದ ಮೊದಲ ಮಾತಾಗಿ ಉಳಿದುಹೋಗಿದೆ. ಆ ಮೊದಲ ಜ್ಞಾನವನ್ನೇ ಮೊದಲನೆಯದಾಗಿ ಸೂರ್ಯನು ಭೂಮಿ ಮೇಲೆ ಮನುಷ್ಯರಿಗೆ ತಿಳಿಸಿದ್ದಾನೆ. ಅದೇ ಮೊದಲ ಜ್ಞಾನವನ್ನೇ ಶ್ರೀಕೃಷ್ಣನು ಅರ್ಜುನನಿಗೆ ಹೇಳಿದ್ದಾನೆ. ಅದೇ ಮೊದಲ ಜ್ಞಾನವನ್ನೇ ಯೇಸು ತನ್ನ ಶಿಷ್ಯರಿಗೆ ಹೇಳಿದ್ದಾನೆ. ಅದೇ ಮೊದಲ

ಜ್ಞಾನವನ್ನೇ ಜಿಬ್ರಯೇಲ್ ಮುಹಮ್ಮದ್ ಪ್ರವಕ್ತರವರಿಗೆ ಹೇಳಿರುವುದು ನಡೆದಿದೆ. ನಮ್ಮ ಅದೃಷ್ಟದಂತೆ ಅದೇ ಮೊದಲ ಜ್ಞಾನವೇ ಈದಿನ ನಮ್ಮ ಮುಂದೆ ಮೂರು ಗ್ರಂಥಗಳಾಗಿ ಇದೆ. ಮೂರು ಗ್ರಂಥಗಳಲ್ಲಿ ಸೃಷ್ಟಿ ಆದಿಯಲ್ಲಿನ ದೈವಜ್ಞಾನವೇ ಇರುವುದರಿಂದ ಮೂರು ಗ್ರಂಥಗಳನ್ನು ದೈವಗ್ರಂಥಗಳೆನ್ನುತ್ತಿದ್ದೇವೆ.

ಸೃಷ್ಟಿ ಆದಿಯಲ್ಲಿ ಹೇಳಿದ ಜ್ಞಾನವು ಶಬ್ದ ರೂಪದಲ್ಲಿ ಹೊರಗೆ ಬಂದಿದೆ. ಆದ್ದರಿಂದ ಮೊದಲು ಜ್ಞಾನವನ್ನು 'ಮಾತು' ಎಂದು ಕರೆಯುತ್ತಿದ್ದೇವೆ. ಮಾತು ಮಹಿಮೆಯೊಂದಿಗೆ ಕೂಡಿಕೊಂಡಿರುತ್ತದೆ. ಆಕಾಶ ಹೇಳಿದ ಮಾತು ಎಂದರೇ ಮಾಡಿದ ಶಬ್ದ ಜ್ಞಾನದಿಂದ ಕೂಡಿಕೊಂಡಿರುವುದರಿಂದ ಅದು ಮಹಿಮೆ ಯೊಂದಿಗೆ ಕೂಡಿಕೊಂಡಿದೆ. ಅದರಲ್ಲಿನ ಮಹಿಮೆಯನ್ನು ತಿಳಿಸುವ ನಿಮಿತ್ತ ಈದಿನ ಮೇಘಗಳು ಶಬ್ದ ಮಾಡುತ್ತಿವೆ. ಶಬ್ದ ಮಹಿಮೆಯಿಂದ ಕೂಡಿಕೊಂಡಿದೆ ಯೆಂದು ತಿಳಿಸುವುದಕ್ಕೆ ಶಬ್ದದೊಂದಿಗೆ ಆಕಾಶದಲ್ಲಿ ಮಿಂಚುಗಳು ಇವೆ. ಮಿಂಚುಗಳೊಂದಿಗೆ ಸಿಡಿಲುಗಳು ಸಹ ಇವೆ. ಇದೆಲ್ಲಾ ದೈವಜ್ಞಾನ ಇಂತಹ ಪ್ರಭಾವವಿದೆಯೆಂದು ಕರ್ಮವನ್ನು ದಹಿಸುವ ಶಕ್ತಿ ಇದೆಯೆಂದು ತಿಳಿಸುವ ನಿಮಿತ್ತವೇ ಹಾಗೆ ಇವೆ. ಯಾವುದು ಏನಾದರೂ ಮೊದಲು ಜ್ಞಾನವಾಗಿ ಬಂದಿರುವ ಶಬ್ದವು ನಂತರ ಕಾಲದಲ್ಲಿ ಗ್ರಂಥರೂಪವಾಗಿ ಬದಲಾಗಿದೆ. ಮೊದಲನೆಯ ಮಾತು ಮೂರು ಯುಗಗಳು ಕಳೆದ ನಂತರ ಶಬ್ದ ಹೋಗಿ ಬರವಣಿಗೆಯ ರೂಪ ಗ್ರಂಥವಾಗಿದೆ. ಹಾಗೆಯೇ ಮೊದಲ ಜ್ಞಾನ ಮೂರು ಗ್ರಂಥಗಳಾಗಿ ತಯಾರಾಗಿವೆ. ಆ ಮೂರು ಗ್ರಂಥಗಳೇ ಈದಿನ ಭಗವದ್ಗೀತೆ, ಬೈಬಲ್, ಖುರಾನ್ ಎನ್ನುವ ಗ್ರಂಥಗಳಾಗಿ ಇವೆ. ಒಂದೇ ಜ್ಞಾನವೇ ಮೂರು ಗ್ರಂಥಗಳಾಗಿ ಬದಲಾಗಿರುವುದರಿಂದ, ನಮಗೆ ಆ ವಿಷಯ ಮೊದಲಿನಿಂದ ಕೊನೆಯವರೆಗು ತಿಳಿದಿರುವುದರಿಂದ ನಾವು ಮೂರು ಗ್ರಂಥಗಳನ್ನು ಸಮಾನವಾಗಿ ನೋಡುತ್ತಿದ್ದೇವೆ. ಸೃಷ್ಟಿ ಆದಿಯಲ್ಲಿ ಹೇಳಲಾಗಿರುವ ಮೊದಲ ಜ್ಞಾನವನ್ನು ಮೂರು ಗ್ರಂಥಗಳಾಗಿ ಬರೆದುಕೊಂಡಿರುವುದು ನಾವೇ. ನಾವೇ ಎಂದರೇ ಮನುಷ್ಯರೇ ಆದರೂ ಮನುಷ್ಯರೇ ಆ ವಿಷಯವನ್ನು ಮರೆತುಹೋಗಿ ಒಂದೇ

ಜ್ಞಾನವನ್ನು ಮೂರು ಮತಗಳಾಗಿ ಸೀಳಿಸಿಕೊಂಡು ಒಂದೊಂದು ಮತಕ್ಕೂ ಒಂದೊಂದು ಗ್ರಂಥವನ್ನು ದೊಡ್ಡದಾಗಿ ಭಾವಿಸಿಕೊಳ್ಳುತ್ತಿದ್ದಾರೆ. ಮೊದಲು ಇಲ್ಲದ ಮತಗಳು ನಂತರ ಹೇಗೆ ಬಂದಿವೆಯೆಂದು ಯಾರೂ ಆಲೋಚಿಸುತ್ತಿಲ್ಲ. ಗ್ರಂಥಗಳ ಜ್ಞಾನವನ್ನು ಹೇಳಿದವರು ಸಹ ಮತಗಳೆಂದು ಹೆಸರಿಟ್ಟು ಎಲ್ಲಿಯೂ ಹೇಳಲಿಲ್ಲ. ಭಗವದ್ಗೀತಾ ಜ್ಞಾನವನ್ನು ಹೇಳಿದ ಕೃಷ್ಣನು ತನ್ನ ಜ್ಞಾನದಲ್ಲಿ ಅಂದರೆ ತನ್ನ ಗ್ರಂಥದಲ್ಲಿ ಮತಗಳ ಪ್ರಸ್ತಾವನೆಯೇ ಇಲ್ಲದಂತೆ ಹೇಳಿದ್ದಾರೆ. ಮತಕ್ಕೆ ಸಂಬಂಧಿಸಿದ ಜ್ಞಾನ ಅದರಲ್ಲಿ ಏನೂ ಇಲ್ಲ. **ಸರ್ವ ಮಾನವರಿಗೂ ಅನ್ವಯಿಸುವ ಬೋಧನೆಯನ್ನು** ಭಗವದ್ಗೀತೆಯಲ್ಲಿ ಹೇಳಿದ್ದಾರೆ ಆದರೆ, ಹಿಂದೂಗಳಿಗೆಂದು ಎಲ್ಲಿಯೂ ಹೇಳಲಿಲ್ಲ. ಅದೇ ರೀತಿಯಾಗಿ ಯೇಸು ಹೇಳಿದ ನಾಲ್ಕು ಸುವಾರ್ತೆಗಳಲ್ಲಿನ ಜ್ಞಾನದಲ್ಲಿ **ಸಮಸ್ತ ಜನರಿಗೆಂದು** ಹೇಳಿದ್ದಾರೆ ಆದರೆ, ಕ್ರೈಸ್ತರಿಗೆಂದು ಎಲ್ಲಿಯೂ ಹೇಳಲಿಲ್ಲ. ಕ್ರೈಸ್ತರು ಬೈಬಲ್ ನಮ್ಮ ಗ್ರಂಥ ಎಂದು ಕರೆಯುತ್ತಿದ್ದರೂ, ಅವರ ಗ್ರಂಥವೆಂದು ಹೇಳುವುದಕ್ಕೆ ಎಲ್ಲಿಯೂ ಆಧಾರವಿಲ್ಲ. ಕೊನೆಯದಾಗಿ ಬಂದಿರುವ ಖುರಾನ್ ಗ್ರಂಥದಲ್ಲಿ **ಸಮಸ್ತ ಲೋಕವಾಸರಿಗೂ** ಇದು ಹಿತೋಪದೇಶ ಎಂದು ಸೂರಾ 81, ಆಯತ್ 27 ರಲ್ಲಿ ಇದೆ. ಖುರಾನ್ ಜ್ಞಾನವನ್ನು ಹೇಳಿದ ಜಿಬ್ರಯೇಲ್ ತನ್ನ ಬೋಧನೆಯಲ್ಲಿ ಎಲ್ಲಿಯೂ ಯಾವ ಮತವನ್ನು ಕುರಿತು ಹೇಳದೇ ಸಮಸ್ತ ಪ್ರಜೆಗಳಿಗೆಂದು ಹೇಳಲಾಗಿದೆ. ಹಾಗಿರುವಾಗ ಇಂತಹ ಗ್ರಂಥ, ಇಂತಹ ಮತಕ್ಕೆ ಸಂಬಂಧಿಸಿರುವುದೆಂದು ಮಾನವರು ಹೇಳದಿದ್ದರೂ ಆ ಮಾತನ್ನು ದೇವರು ಒಪ್ಪಿಕೊಳ್ಳುವುದಿಲ್ಲ. ಏಕೆಂದರೇ ದೇವರು ಪ್ರಜೆಗಳನ್ನು ಸಮಾನವಾಗಿ ಸೃಷ್ಟಿಸಿದ್ದಾನೆ ಆದರೆ ಮತಸ್ಥರನ್ನಾಗಲೀ, ಮತಗಳನ್ನಾಗಲೀ ಸೃಷ್ಟಿಸಲಿಲ್ಲ.

ಎಲ್ಲಾದರೇ ಮತವಿದೆಯೋ ಅಲ್ಲಿ ದೇವರ ಜ್ಞಾನವಿದ್ದರೂ, ಅದರಲ್ಲಿ ಶಕ್ತಿ ಇರುವುದಿಲ್ಲ. ಎಲ್ಲಾದರೆ ಮತ ಇಲ್ಲವೋ ಅಲ್ಲಿ ಇರುವ ಜ್ಞಾನಕ್ಕೆ ಅಮಿತವಾದ ಶಕ್ತಿ ಇರುತ್ತದೆ. ಆದ್ದರಿಂದಲೇ ಈದಿನ ಮತಗಳಿರುವ ಕಡೆ ದೈವಜ್ಞಾನವಿದ್ದರೂ, ಅದರಲ್ಲಿ ದೇವರ ಶಕ್ತಿ ಇಲ್ಲದಂತೇ ದೇವರೇ ಮಾಡಿದ್ದಾನೆ. ಹಾಗಿರುವಾಗ

ಅವರ ಹತ್ತಿರ ಇರುವ ಜ್ಞಾನ ಹೆಸರಿಗೆ ಮಾತ್ರವೇ ಇರುತ್ತದೆ ಆದರೆ ಅದರಲ್ಲಿ ಯಾವ ಶಕ್ತಿ ಇಲ್ಲದಂತಿರುತ್ತದೆ. ಅಂತಹ ಶಕ್ತಿ ಇಲ್ಲದ ಜ್ಞಾನ ಮನುಷ್ಯರ ಕರ್ಮಗಳನ್ನು ಸುಡುವುದಿಲ್ಲ. ಅಂದರೇ ಅವರ ಪಾಪಗಳನ್ನು ಅವರಿಗಿರುವ ಜ್ಞಾನ ಹರಿಸುವುದಿಲ್ಲ. ಪಾಪ ಕ್ಷಮಾಶೀಲತೆ ಇಲ್ಲದಂತೆ ಹೋಗುವುದರಿಂದ ಮನುಷ್ಯನಿಗೆ ಜ್ಞಾನದಿಂದ ಉಪಯೋಗ ಏನೂ ಇಲ್ಲವೆಂದೇ ಹೇಳಬಹುದು. ಮತಗಳಿಗೆ ಅತೀತವಾದ ಜ್ಞಾನ ಎಲ್ಲಾದರೇ ಇರುತ್ತದೋ, ಅಲ್ಲಿ ಜ್ಞಾನಶಕ್ತಿ ಇದ್ದು ಅವರ ಪಾಪಗಳನ್ನು ಸುಟ್ಟುಹಾಕುತ್ತದೆ. ಅದರಿಂದ ಪಾಪ ಕ್ಷಮಾಶೀಲತೆ ಉಂಟಾಗುತ್ತದೆಂದು ಹೇಳಬಹುದು. ಮತಗಳ ಪ್ರಸಕ್ತಿಯೇ ಇಲ್ಲದ ಜ್ಞಾನ ಮೂರು ದೈವಗ್ರಂಥಗಳಲ್ಲಿಯೂ ಇದೆ. ಮೂರು ಗ್ರಂಥಗಳ ಜ್ಞಾನ ಪಾಪಗಳನ್ನು ಇಲ್ಲದಂತೆ ಮಾಡುವ ಶಕ್ತಿಯನ್ನು ಹೊಂದಿದೆ. ಆದ್ದರಿಂದ ಯಾವ ಮತಸ್ಥನಾದರೂ ದೈವಗ್ರಂಥಗಳ ಹತ್ತಿರ ತನ್ನ ಮತ ಭಾವವನ್ನು ಬಿಟ್ಟು ದೈವಜ್ಞಾನವನ್ನು ತಿಳಿಯುವುದಾದರೇ, ಅವನಿಗೆ ಅಮಿತವಾದ ಜ್ಞಾನದ ಲಾಭ ಉಂಟಾಗುತ್ತದೆ. ಅವನ ಕರ್ಮಗಳು ಸುಟ್ಟುಹೋಗುತ್ತವೆ.

ಸೃಷ್ಟಿ ಆದಿಯಲ್ಲಿ ಹೇಳಿದ ಮಾತು ಕಾಣಿಸುವ ಮೇಘಗಳದಾದರೂ ಅದು ವಾಸ್ತವವಾಗಿ ಕಾಣಿಸದ ಆಕಾಶದ್ದೇಯೆಂದು ಹೇಳಬಹುದು. ಆದರೆ ಆಕಾಶವೇ ಆ ವಿಷಯವನ್ನು ಹೇಳಿದೆಯಾ ಎಂದು ನೋಡಿದರೇ, ಆಕಾಶ ಸಹ ಒಂದು ಭೂತವಾಗುವುದರಿಂದ ಯಾವ ಭೂತ (ಯಾವ ಜೀವಿಯು) ಯಾವ ಕಾರ್ಯ ಮಾಡುವುದಿಲ್ಲವೆಂಬ ಶಾಸ್ತ್ರಬದ್ಧವಾದ ಸೂತ್ರದ ಪ್ರಕಾರ, ಆಕಾಶವು ಸಹ ಸ್ವತಃವಾಗಿ ಜ್ಞಾನವನ್ನು ಹೇಳಲಿಲ್ಲ. ಆದರೆ ಸೃಷ್ಟಿ ಆದಿಯಲ್ಲಿ ಜ್ಞಾನ ಆಕಾಶದಿಂದ ಹೇಳಲಾಗಿದೆ ಎಂದು ದೇವರೆ ಸ್ವತಃವಾಗಿ ಹೇಳಿರುವುದರಿಂದ ದೇವರು ಅಸತ್ಯವನ್ನು ಹೇಳಿದ್ದಾನಾ? ಎನ್ನುವ ಪ್ರಶ್ನೆ ಬರಬಲ್ಲದು. ಇಲ್ಲಿ ಸತ್ಯವನ್ನು ಹೇಳಿಕೊಂಡರೆ ಜೀವಿಯು ಹೇಗೆ ಯಾವ ಕೆಲಸ ಮಾಡಲಿಲ್ಲವೊ ಹಾಗೆಯೇ ದೇವರು ಸಹ ಕೆಲಸ ಮಾಡುವವನಲ್ಲ. ಜೀವಿಯು ಯಾವ ಕೆಲಸ ಮಾಡಲಾರನು, ಮಾಡಲು ನಿಶ್ಶಕ್ತನು. ದೇವರು ಕೈಲಾದರೂ ಮಾಡುವುದಿಲ್ಲ.

ಯಾವ ಕಾರ್ಯವನ್ನು ಇತ್ತ ಜೀವಿಯಾಗಲೀ, ಅತ್ತ ದೇವರಾಗಲೀ ಮಾಡುವುದಿಲ್ಲ. ಅದರೆ ಆಕಾಶ ಹೇಳಿದೆಯೆಂದು ಹೇಳದ ಆಕಾಶದ ಮೇಲೆ ಹೇಳಿರುವುದು ಯಾರು? ಎನ್ನುವ ಪ್ರಶ್ನೆ ಬರಬಲ್ಲದು. ಅದಕ್ಕೆ ಸಮಾಧಾನವಾಗಿ ಯಾರಿಗೂ ತಿಳಿಯದವನು, ಎಲ್ಲರಲ್ಲಿ ಅಡಗಿರುವವನು, ಎಲ್ಲರ ಹಿಂದೆ ಇದ್ದು ಎಲ್ಲರನ್ನೂ ಆಡಿಸುವವನು, ಎಲ್ಲಾ ತಾನೇ ಮಾಡುತ್ತಿದ್ದರೂ ತನ್ನನ್ನು ಯಾರೂ ಗುರುತು ಹಿಡಿಯದಂತೆ ಎಲ್ಲರಲ್ಲಿದ್ದು ಮಾಡುವವನು, ಪ್ರಯತ್ನವನ್ನು ಅನುಸರಿಸುವ ಯೋಗಿಗಳಿಗೆ ಹೊರತು ಯಾರಿಗೂ ತಿಳಿಯದವನು ಒಬ್ಬನಿದ್ದಾನೆ. ಆತನೇ ಸೃಷ್ಟಿ ಆದಿಯಲ್ಲಿ ಅತ್ತ ದೇವರನ್ನು, ಇತ್ತ ಮಹಾಭೂತವಾದ ಆಕಾಶವನ್ನು ಅಡ್ಡ ಇಟ್ಟುಕೊಂಡು ಜ್ಞಾನವನ್ನು ಹೇಳಿದ್ದಾನೆ. ಒಂದು ಸಲ ಹೇಳಿದ ಆತನ ಮಾತು ಶಾಶ್ವತವಾಗಿ ನಿಂತುಹೋಗಿದೆ. ಆಗ ಆತನು ಹೇಳಿದ ಜ್ಞಾನವೇ ಇದು ಎಂದು ಯಾರೂ ತಿಳಿಯದಂತೆ ಅದನ್ನೇ ಮೂರು ದೈವಗ್ರಂಥಗಳಾಗಿ ಮಾಡಿದ್ದಾನೆ. ಅಂದಿಗೂ ಸಹ ತನ್ನನ್ನು ಯಾರೂ ಗುರುತಿಸದಂತೆ, ತಾನು ಹೇಳಿದ ಜ್ಞಾನವನ್ನು ತಿಳಿದ ನಂತರ ಯಾರ ದೃಷ್ಟಿ ತನ್ನ ಮೇಲೆ ಬೀಳದಂತೆ ಯಾರನ್ನೂ ಬಿಡದಂತೆ, ಕನಿಷ್ಟ ಒಬ್ಬನನ್ನು ಸಹ ಬಿಡದಂತೆ ಮತ ಎನ್ನುವ ಮೂರು ಬಲೆಗಳಲ್ಲಿ ಮನುಷ್ಯರು ಸಿಲುಕಿಕೊಂಡು ಅದರಿಂದ ಹೊರಬೀಳುವಂತೆ ಮಾಡಿದ್ದಾನೆ. ಆದ್ದರಿಂದ ಸೃಷ್ಟಿ ಆದಿಯಲ್ಲಿ ಹೇಳಿದ ಒಬ್ಬರು, ಒಂದು ಸಲ, ಮಾತುಗಳ ಸಮೂಹವಾಗಿ ಹೇಳಿದ ಒಂದು ಜ್ಞಾನವೇ ಮೂರು ಗ್ರಂಥಗಳಾಗಿ ತಯಾರಾಗಿದೆಯೆಂದು ಗುರುತಿಸಲಾರದೆ ಹೋಗುತ್ತಿದ್ದಾರೆ. ಇಂದಿಗಾದರೂ ಈಗ ನಾವು ಹೇಳಿದ ಈ ದೊಡ್ಡ ರಹಸ್ಯವನ್ನು ಗ್ರಹಿಸಿ ಮೂರು ಗ್ರಂಥಗಳಲ್ಲಿನ ಜ್ಞಾನವನ್ನು ಒಂದೇ ಮಾತಾಗಿ ಗುರುತಿಸಿ ಕೈಲಾದರೇ ಯಾರಿಗೂ ತಿಳಿಯದವನನ್ನು, ಮೂರು ಗ್ರಂಥಗಳ ಮಾತನ್ನು ಹೇಳಿದ ಅವನನ್ನು ಕಂಡುಹಿಡಿಯಿರಿ ನೋಡೋಣ. ನನ್ನ ಮಾತನ್ನು ರೋಷದಿಂದ ನೋಡಿರಿ, ನಿಮ್ಮ ಹಿಂದೆ ಅಡಗಿರುವವನನ್ನು ಹುಡುಕಿರಿ.

**ಪ್ರಶ್ನೆ :– ನೀವು ಎಷ್ಟೋ ವಿಶೇಷವಾಗಿ ಹೇಳಿದ್ದೀರ. ಆದರೆ ಇದೆಲ್ಲವೂ ಕೇಳಿದ**

**ನಂತರವೂ ಸಹ ನಮ್ಮಲ್ಲಿ ಚಿಕ್ಕ ಅನುಮಾನ ಪ್ರಶ್ನೆಯಾಗಿ ಉಳಿದಿದೆ. ಕೊನೆಯದಾಗಿ ಅದನ್ನು ಕೇಳುತ್ತಿದ್ದೇವೆ. ದಯಮಾಡಿ ಉತ್ತರವನ್ನು ಹೇಳಿರಿ. ಸೃಷ್ಟಿ ಆದಿಯಲ್ಲಿ ಆಕಾಶ ಮೇಘಗಳಿಂದ ಜ್ಞಾನವನ್ನು ಮೇಘ ಘರ್ಜನೆಯಿಂದ ಹೇಳಿದೆಯೆಂದು ನಂಬುತ್ತಿದ್ದೇವೆ. ಆದರೆ ಮೇಘಗಳಿರುವುದು ಆಕಾಶದಲ್ಲಿಯೇ ಆದರೂ ಭೂಮಿಗೆ ಸ್ವಲ್ಪ ಎತ್ತರದಲ್ಲೇ ಇರುತ್ತವೆ. ಸೂರ್ಯನು ಆಕಾಶದಲ್ಲಿ ಕೆಲವು ಲಕ್ಷ ಕಿಲೋಮೀಟರ್ ಗಳ ದೂರದಲ್ಲಿ ಮೇಘಗಳ ಶಬ್ದ ಕೇಳಿಸದಷ್ಟು ದೂರವಾಗಿ ಇರುತ್ತಾನೆ. ಮೇಘಗಳು ಭೂಮಿಗೆ ಹತ್ತಿರವಾಗಿವೆ ಆದ್ದರಿಂದ ಮೇಘಗಳ ಶಬ್ದ ಭೂಮಿಮೇಲೆ ಮನುಷ್ಯರಿಗೆ ಕೇಳಿಸಬಹುದು. ಮೇಘಗಳು ಎಷ್ಟು ದೊಡ್ಡದಾಗಿ ಶಬ್ದ ಮಾಡಿದರೂ ಯಾವ ಮಾತ್ರವೂ ಕೇಳಿಸದಷ್ಟು ದೂರದಲ್ಲಿ ಸೂರ್ಯ ನಿರುವುದರಿಂದ ಆಕಾಶ ಮೇಘಗಳು ಮಾಡಿದ ಶಬ್ದವನ್ನು ಹೇಗೆ ಕೇಳಿದ್ದಾನೆ? ಅದರಲ್ಲಿನ ಜ್ಞಾನವನ್ನು ಹೇಗೆ ತಿಳಿದಿದ್ದಾನೆ? ಹೇಗೆ ನೋಡಿದರೂ ಮೇಘಗಳ ಶಬ್ದ ಕೇಳುವ ಅವಕಾಶ ಸೂರ್ಯನಿಗೆ ಇಲ್ಲದಿರುವಾಗ ಮೇಘಗಳ ಗುಡುಗುಗಳಲ್ಲಿನ ಜ್ಞಾನವನ್ನು ಹೇಗೆ ತಿಳಿಯಬಲ್ಲನು? ಎನ್ನುವ ಪ್ರಶ್ನೆ ಯಾರಿಗಾದರೂ ಬರಬಲ್ಲದು. ಈ ವಿಷಯವನ್ನು ಕುರಿತು ಸ್ವಲ್ಪ ವಿವರವಾಗಿ ತಿಳಿಸುವಿರೆಂದು ಕೇಳುತ್ತಿದ್ದೇವೆ.**

**ಉತ್ತರ :–** ಮನುಷ್ಯರು, ದೇವತೆಗಳು ದೇವರಿಂದ ಸೃಷ್ಟಿಸಲ್ಪಟ್ಟಿದ್ದಾರೆ. ಹಾಗೆಯೇ ದೇವರ ಪಾಲನೆ ಸಾಗುವುದಕ್ಕೆ ಭೂತಗಳು, ಮಹಾಭೂತಗಳು, ಗ್ರಹಗಳು, ಮಹಾಗ್ರಹಗಳು ಎನ್ನುವ ಉಳಿದ ಎರಡು ಜಾತಿಗಳನ್ನು ಸಹ ದೇವರು ಸೃಷ್ಟಿಸಿದ್ದಾನೆ. ದೇವರ ಸೃಷ್ಟಿಯಲ್ಲಿ ಮನುಷ್ಯರು, ದೇವತೆಗಳು ಒಂದು ಭಾಗವಾದಾಗ, ಭೂತಗಳು, ಗ್ರಹಗಳು ಮತ್ತೊಂದು ಭಾಗವಾಗಿ ಇವೆ. ದೇವತೆಗಳಿಗೆ ಮನುಷ್ಯರಿಗಿಂತ ಸ್ವಲ್ಪ ಪ್ರತ್ಯೇಕವಾದ ಜೀವನವನ್ನು ದೇವರು ಉಂಟುಮಾಡಿದ್ದಾನೆ. ಮನುಷ್ಯರಿಗೆ ಸ್ಥೂಲ ಶರೀರವಿರುವಂತೆ ದೇವತೆಗಳಿಗೆ ಕಲ್ಲಿನ ಪ್ರತಿಮೆಗಳು, ಸಿಮೆಂಟು ಗೊಂಬೆಗಳು ಸ್ಥೂಲ ಶರೀರಗಳಾಗಿ ಇವೆ. ಮನುಷ್ಯ ತನ್ನ ಸ್ಥೂಲ ಶರೀರವನ್ನು ಒಂದು ಸಲ ಬಿಟ್ಟರೇ ಅದನ್ನು 'ಮರಣ' ಎನ್ನುತ್ತೇವೆ. ಜೀವಿಯು (ಮನುಷ್ಯ) ಶರೀರವನ್ನು ಬಿಟ್ಟು ಹೊರಗೆ ಬಂದರೆ

ಪುನಃ ಅದರಲ್ಲಿ ಸೇರಲಾರನು. ಅದೇ ದೇವತೆಗಳಾದರೇ ಕಲ್ಲಿನ ವಿಗ್ರಹದಿಂದ ಹೊರಗೆ ಬರಬಲ್ಲರು, ಪುನಃ ಒಳಗೆ ಹೋಗಬಲ್ಲರು. ಕಲ್ಲಿನ ಶರೀರ ಸ್ಥೂಲ ಶರೀರವಾಗಿ ಇರುವುದರಿಂದ ದೇವರು ಅಂತಹ ಸೌಕರ್ಯವನ್ನು ಮಾಡಿದ್ದಾರೇನೋ ಹೇಳಲಾರೆವು. ಒಬ್ಬ ದೇವತೆ ತನ್ನ ಸ್ಥೂಲ ಶರೀರವಾದ ವಿಗ್ರಹದಿಂದ ಒಂದು ದಿನದಲ್ಲಿ ಎಷ್ಟು ಸಲವಾದರೂ ಹೊರಗೆ ಬರಬಲ್ಲದು, ಪುನಃ ಒಳಗೆ ಸುಲಭವಾಗಿ ಹೋಗಬಲ್ಲದು. ಆ ರೀತಿಯಾಗಿ ಮನುಷ್ಯನಾದವನು ಮಾಡಬಲ್ಲನು. ಮನುಷ್ಯ ಒಂದು ಸಲ ಶರೀರದಲ್ಲಿ ಪ್ರವೇಶಿಸಿದರೇ 'ಜನ್ಮ' ಎನ್ನುತ್ತೇವೆ. ಒಂದು ಸಲ ಶರೀರದಿಂದ ಹೊರಗೆ ಬಂದರೆ 'ಮರಣ' ಎನ್ನುತ್ತೇವೆ. ಈ ರೀತಿಯಾಗಿ ದೇವತೆಗಳಿಗು, ಮನುಷ್ಯರಿಗು ವ್ಯತ್ಯಾಸವಿರುತ್ತದೆ.

ದೇವತೆಗಳು, ಮನುಷ್ಯರು ಇಬ್ಬರೂ ಕರ್ಮ ಜೀವಿಗಳೇ ಆಗಿರುವುದರಿಂದ ಕರ್ಮಕ್ಕೆ ಒಳಗಾಗಿ ಕಷ್ಟಸುಖಗಳನ್ನು ಅನುಭವಿಸುತ್ತಾ ಬದುಕುತ್ತಿರುವರು. ಅವರು ಕರ್ಮಬದ್ಧರಾಗಿ ತಮ್ಮ ಜೀವನವನ್ನು ತಾವು ಕಳೆಯುತ್ತಿದ್ದಾರೆ. ಆದರೆ ಮನುಷ್ಯರು ದೇವತೆಗಳನ್ನು ಅವರು ತಮಗಿಂತ ದೊಡ್ಡವರೆಂದು ಭಾವಿಸಿ, ಅವರಿಗೆ ಗುಡಿಗಳನ್ನು ಕಟ್ಟಿ ಪೂಜಿಸುವುದು ನಡೆಯುತ್ತಿದೆ. ಮನುಷ್ಯರ ಬಲಹೀನತೆಯನ್ನು, ಅಜ್ಞಾನವನ್ನು ಆಸರೆಯಾಗಿ ಮಾಡಿಕೊಂಡು ದೇವತೆಗಳು ಮನುಷ್ಯರನ್ನು ಹೆದರಿಸುತ್ತಾ, ಭಯಪಡಿಸುತ್ತಾ ಅಕ್ರಮವಾಗಿ ಪೀಡಿಸುತ್ತಾ, ಅನವಶ್ಯಕವಾಗಿ ವೇಧಿಸುತ್ತಾ ಪ್ರಜೆಗಳನ್ನು ತಮ್ಮ ವಶರಾಗಿ ಮಾಡಿಕೊಂಡು ಅವರಿಂದ ದೊಡ್ಡದಾಗಿ ಹೊಗಳಿಸಿಕೊಳ್ಳುವುದು, ಪೂಜೆಗಳು ಮಾಡಿಸಿಕೊಳ್ಳುವುದು ಮಾಡುತ್ತಿದ್ದಾರೆ. ಪ್ರಜೆಗಳು ದೇವತೆಗಳನ್ನೇ ದೊಡ್ಡದಾಗಿ ತಿಳಿದು ತಮ್ಮನ್ನು ಸೃಷ್ಟಿಸಿದ ದೇವರನ್ನು ಮರೆತುಹೋಗಿ ದೇವತೆಗಳನ್ನೇ ದೊಡ್ಡದಾಗಿ ಭಾವಿಸಿ ಪೂಜಿಸುತ್ತಿದ್ದಾರೆ. ದೇವತೆಗಳು ಸಹ ಪ್ರಜೆಗಳ ಮೇಲೆ ತಮ್ಮ ಹಿರಿಮೆಯನ್ನು ಚೆಲಾಯಿಸುತ್ತಾ ತಮ್ಮನ್ನು ತಾವು ದೊಡ್ಡದಾಗಿ ತಿಳಿಯುತ್ತಾ ಗರ್ವದಿಂದ ತಮ್ಮನ್ನು ಸೃಷ್ಟಿಸಿದ ದೇವರನ್ನು ಪೂರ್ತಿಯಾಗಿ ಮರೆತುಹೋಗಿದ್ದಾರೆ. ಮನುಷ್ಯರು, ದೇವತೆಗಳು ಇದ್ದರೂ ಪೂರ್ತಿ ಅಜ್ಞಾನದಲ್ಲಿ ಮುಳುಗಿ ಮನುಷ್ಯರು ದೇವತೆಗಳನ್ನು

ಪೂಜಿಸಿದಾಗ, ದೇವತೆಗಳು ಮನುಷ್ಯರಿಗಿಂತ ದೊಡ್ಡವರೆನ್ನುವ ಅಜ್ಞಾನದಲ್ಲಿದ್ದಾರೆ. ಇದು ದೇವರು ಸೃಷ್ಟಿಸಿದ ಕರ್ಮ ಸಂಬಂಧ ಸೃಷ್ಟಿಯಲ್ಲಿನ ದೇವತೆಗಳ, ಮನುಷ್ಯರ ಕೆಲಸವಾಗಿ ಇದೆ.

ಇನ್ನು ಕರ್ಮ ಇಲ್ಲದಂತೆ ಸೃಷ್ಟಿಸಲಾಗಿರುವ ಜೀವಿಗಳು ಕೆಲವರಿದ್ದಾರೆ. ಅವರೇ ಭೂತಗಳು ಗ್ರಹಗಳಾಗಿ ಹೇಳಲಾಗುತ್ತಿದ್ದಾರೆ. ಇವರಿಗೆ ಕರ್ಮ ಇಲ್ಲ, ಕರ್ಮ ಸಂಪಾದಿಸುವುದಿಲ್ಲ. ದೇವರು ನಿಯಮಿಸಿರುವ ಕೆಲಸವನ್ನು ಮಾತ್ರ ಮಾಡುತ್ತಿರುವರು. ದೇವರ ಪರಿಪಾಲನೆಯಲ್ಲಿ ಕಾಲವನ್ನು ಕಳೆಯುತ್ತಿರುವರು. ಜೀವಿಗಳ ಸಾವು ಹುಟ್ಟುಗಳು, ಜೀವನಗಳು ಇನ್ನೂ ಮುಂತಾದ ಪಾಲನಾ ವಿಧಾನವೆಲ್ಲವೂ ಇವರು ಮಾಡುವುದರಿಂದ ನಡೆಯುತ್ತಿರುತ್ತದೆ. ಒಂದು ವಿಧವಾಗಿ ಗ್ರಹಗಳು, ಭೂತಗಳು ದೇವರಿಗೆ ಹತ್ತಿರವಾಗಿದ್ದು ದೇವರ ಆಜ್ಞೆಯ ಪ್ರಕಾರ ನಡೆಯುತ್ತಿರುವರು. ಭೂತಗಳಿಗೂ ಗ್ರಹಗಳಿಗೂ ಸಹ ಶರೀರಗಳು ಇವೆ. ಆದರೆ ಕೆಲವರ ಶರೀರಗಳು ಮನುಷ್ಯನ ಕಣ್ಣಿಗೆ ಕಾಣಿಸುವವಾಗಿ ಇವೆ. ಕೆಲವು ಶರೀರಗಳು ಮನುಷ್ಯರಿಗೆ ಕಾಣಿಸದಂತೆ ಇವೆ. ಈಗ ನಾವು ಹೇಳಿಕೊಳ್ಳುವ ಸೂರ್ಯ ಗ್ರಹವಾಗಲೀ, ಆಕಾಶ ಭೂತವಾಗಲೀ ಬೇರೆಬೇರೆ ವಿಭಾಗಗಳಾದರೂ, ಒಂದು ಭೂತವಾದರೂ, ಮತ್ತೊಂದು ಗ್ರಹವಾದರೂ ಎರಡಕ್ಕೂ ಶರೀರಗಳು ಇವೆ. ಆಕಾಶ ಸ್ಥೂಲ ಮತ್ತು ಸೂಕ್ಷ್ಮವಾಗಿದ್ದೂ ಕಾಣಿಸಿ ಕಾಣಿಸದಂತೆ ಇದೆ. ಸೂರ್ಯನ ಶರೀರ ಉರಿಯು (ಪ್ರಕಾಶಿಸು) ವ ಗೋಳದಂತೆ ಇರುವಾಗ, ಆಕಾಶವೊಂದರ ಶರೀರ ಕದಲುವ ಮೇಘಗಳಾಗಿ ಇದೆ. ಗ್ರಹವಾದ ಸೂರ್ಯನು, ಭೂತವಾದ ಆಕಾಶ ಎರಡೂ ಜೀವಿಗಳೇ ಆದರೂ ಯಾವುದರ ಶಕ್ತಿ ಅದರದೇ, ಯಾವುದರ ಕೆಲಸ ಅದರದೇ. ಗ್ರಹಗಳಾಗಲೀ, ಭೂತಗಳಾಗಲೀ ಕರ್ಮ ಪ್ರಕಾರ ನಡೆಯುವವು ಅಲ್ಲ. ಆದ್ದರಿಂದ ಅವು ಒಂದಕ್ಕೊಂದು ಘರ್ಷಣೆ ಮಾಡುವುದಿಲ್ಲ, ಸ್ನೇಹ ಮಾಡುವುದಿಲ್ಲ. ಅವುಗಳ ಮಧ್ಯೆ ಪ್ರೀತಿ, ದ್ವೇಷ ಎನ್ನುವ ಗುಣಗಳಿಗೆ ಸ್ಥಾನವಿರುವುದಿಲ್ಲ. ಎರಡೂ ದೇವರ ಸೇವೆಯ ನಿಮಿತ್ತ ಇರುವವೇ.

ದೇವರ ಪಾಲನೆಯಲ್ಲಿ ಭಾಗವಾಗಿ ಭೂತಗಳಾಗಲೀ, ಗ್ರಹಗಳಾಗಲೀ ತಮ್ಮ ಸ್ಥಾನಗಳನ್ನು ಬಿಟ್ಟು ಇತರೆ ಸ್ಥಾನಗಳಿಗೆ ಹೋಗಬೇಕಾಗಿರುತ್ತದೆ. ಅದೇ ವಿಧವಾಗಿ ತಮ್ಮ ಶರೀರಗಳನ್ನು ತ್ಯಜಿಸಿ ಸೂಕ್ಷ್ಮವಾಗಿ ಕಾಣಿಸದಂತೆಯೂ ಸಹ ಇತರ ಜಾಗಗಳೊಳಗೆ, ಇತರ ಮಂಡಲಗಳೊಳಗೆ ಹೋಗಬೇಕಾಗಿರುತ್ತದೆ. ದೇವರ ಕಾರ್ಯಗಳನ್ನು ಈಡೇರಿಸುವ ನಿಮಿತ್ತ ಗ್ರಹಗಳಾಗಲೀ, ಭೂತಗಳಾಗಲೀ, ನಕ್ಷತ್ರಗಳ ಸಮೀಪದವರೆಗು ಹೋಗಿ ಬಂದಿರುವ ಸಂದರ್ಭಗಳು ಇವೆ. ಆದರೆ ಈ ವಿಷಯಗಳು ಎಂತಹ ಖಗೋಳ ಶಾಸ್ತ್ರಜ್ಞರಿಗೂ ಯಾವ ಮಾತ್ರ ಇಲ್ಲಿಯ ವರೆಗೂ ತಿಳಿದಿಲ್ಲ. ಭೂಮಿ ಮೇಲೆ ದೇವತೆಗಳು ತಮ್ಮ ಕಲ್ಲಿನ ಶರೀರಗಳನ್ನು ಬಿಟ್ಟು ಹೊರಗೆ ಬರುವುದು ಪುನಃ ಒಳಗೆ ಹೋಗುವುದು ಹೇಗೆ ನಡೆಯುತ್ತಿದೆಯೋ ಅದೇ ರೀತಿಯಾಗಿ ಗ್ರಹಗಳು, ಭೂತಗಳು ಮಾಡುತ್ತಿವೆ. ಆಕಾಶದಲ್ಲಿ ಈ ವಿಧವಾಗಿ ನಡೆಯುತ್ತಿದೆಯೆಂದು ನಾವು ತಿಳಿಯುವುದಕ್ಕೇ ದೇವತೆಗಳಿಗು ಅಂತಹ ಸೌಕರ್ಯವನ್ನು ದೇವರು ಮಾಡಿದ್ದಾರೇನೋ ಅನಿಸುತ್ತಿದೆ.

ಕರ್ಮ ವಿಧಾನದಲ್ಲಿ ಬಂಧೀಗಳಾಗಿರುವ ಮನುಷ್ಯರಿಗೆ ಮೊದಲು ಏನು ನಡೆಯುತ್ತದೋ ತಿಳಿದಿಲ್ಲ. ಅದೇ ಗ್ರಹಗಳು, ಭೂತಗಳು ಕರ್ಮ ಬಂಧನದಲ್ಲಿ ಇಲ್ಲದಂತೆ ಇರುವುದರಿಂದ ಅವರಿಗೆ ಕೆಲವು ಗಂಟೆಗಳ ಮೊದಲು ನಡೆಯುವ ವಿಷಯಗಳನ್ನು ತಿಳಿಯುತ್ತವೆ. ಸೃಷ್ಟಿ ಆದಿಯಲ್ಲಿಯೇ ತಮ್ಮ ಕರ್ತವ್ಯವನ್ನು ಸಕ್ರಮವಾಗಿ ಈಡೇರಿಸುವ ಸೂರ್ಯನು ಆಕಾಶದಲ್ಲಿ ಮೇಘಗಳ ಮೂಲಕ ಜ್ಞಾನ ಹೇಳಲ್ಪಡುತ್ತಿದೆಯೆಂದು ತಿಳಿದು, ಮೇಘಗಳು ಭೂಮಿಗೆ ಹತ್ತಿರವಾಗಿ ಜ್ಞಾನವನ್ನು ತನ್ನ ಶಬ್ದದ ಮೂಲಕ ಹೇಳುತ್ತಿವೆಯೆಂದು ತಿಳಿದು, ಭೂಮಿಮೇಲಿರುವ ಮನುಷ್ಯರು ಮೇಘಗಳ ಶಬ್ದವನ್ನು ಕೇಲಿದರೂ ಗ್ರಹಿಸಲಾರರೆಂದು ಯೋಚಿಸಿ, ಮೊದಲು ತಾನು ಮೇಘಗಳು ಹೇಳುವ ಜ್ಞಾನವನ್ನು ಕೇಳಿ ನಂತರ ಪ್ರಜೆಗಳಿಗೆ ತಿಳಿಸುವೆನೆಂದು ತಿಳಿದು, ಅದೇ ಕೆಲಸದಂತೆ ಆಕಾಶದಲ್ಲಿ ಸುದೂರವಾಗಿರುವ ಸೂರ್ಯನು ತನ್ನ ಸ್ಥೂಲ ದೇಹವಾದ ಅಗ್ನಿ

ಗೋಳವನ್ನು ಬಿಟ್ಟು, ಭೂಮಿ ಮೇಲೆ ಭೂಮಿಗೆ ಸಮೀಪವಾಗಿರುವ ಮೇಘಗಳ ಹತ್ತಿರಕ್ಕೆ ಬಂದಿರುವುದು ನಡೆದಿದೆ.

ಇದೆಲ್ಲವೂ ಸೃಷ್ಟಿ ಪ್ರಾರಂಭವಾದ ಪ್ರಭವ ಸಂವತ್ಸರದಲ್ಲಿಯೇ ನಡೆದಿದೆ. ಅಂದರೆ ಸೃಷ್ಟಿ ಪ್ರಾರಂಭವಾದ ಸಂವತ್ಸರದಲ್ಲಿಯೇ ದೇವರು ಆಕಾಶವಾಣಿ ಮೂಲಕ ತನ್ನ ಜ್ಞಾನವನ್ನು ಹೇಳಿಸಿದ್ದಾನೆ. ಖಚಿತವಾಗಿ ಹೇಳಲಾರೆವು ಆದರೆ, ಆಕಾಶ ಮೇಘಗಳಿಂದ ಜ್ಞಾನ ಹೇಳಿರುವುದು ಸೃಷ್ಟಿ ಅನಂತರ ಐದನೇ ತಿಂಗಳಲ್ಲಿ ನಡೆದಿದೆಯೆಂದು ಹೇಳಬಹುದು. ಯಾವಾಗ ನಡೆದಿದೆಯೆನ್ನುವುದು ಮುಖ್ಯವಲ್ಲ ಆದರೆ, ಏನು ನಡೆದಿದೆಯೆನ್ನುವುದೇ ಮುಖ್ಯ. ಮೇಘಗಳ ಮೂಲಕ ಜ್ಞಾನವು ತಿಳಿಯುತ್ತದೆಂದು ತಿಳಿದ ಸೂರ್ಯನು, ಭೂಮಿಯ ಸಮೀಪಕ್ಕೆ ಬಂದು ಮೇಘಗಳು ಗುಡುಗಿ ಹೇಳಿದ ಶಬ್ದವನ್ನು ಗ್ರಹಿಸಿ, ಪುನಃ ಆಕಾಶದಲ್ಲಿನ ತನ್ನ ಸ್ಥೂಲ ಶರೀರವನ್ನು ಸೇರಿ, ಕೆಲವು ಸಂವತ್ಸರಗಳು, ಭೂತಗಳಿಗೆ ಮೇಘಗಳು ಹೇಳಿದ ಮೊದಲ ಜ್ಞಾನವನ್ನು ತಿಳಿಸುವುದು ನಡೆದಿದೆ. ಹಾಗೆ ಸೂರ್ಯನಿಂದ ನಕ್ಷತ್ರಮಂಡಲದವರೆಗು ದೈವಜ್ಞಾನವು ವಿಸ್ತರಿಸಿದೆ. ಅನೇಕ ಗೋಳಗಳಿಗೆ ದೈವಜ್ಞಾನವನ್ನು ಸೂರ್ಯನು ತಲುಪಿಸುತ್ತಿದ್ದಾನೆ. ಆ ವಿಧವಾಗಿ ವಿಶ್ವವ್ಯಾಪ್ತವಾಗಿ ಭೂತಗಳಿಗು, ಗ್ರಹಗಳಿಗು ದೈವಜ್ಞಾನ ತಿಳಿದುಹೋಗಿದೆ.

ನಂತರ ಸ್ವಲ್ಪ ಕಾಲಕ್ಕೆ ಭೂಮಿಯಲ್ಲಿನ ಪ್ರಜೆಗಳಿಗೆ ಮೊದಲ ಗುರುವಾಗಿ ಸೂರ್ಯನು ಬಂದು ಮನುವು ಎನ್ನುವ ವ್ಯಕ್ತಿಗೆ ದೈವಜ್ಞಾನವನ್ನು ಹೇಳಲಾಗಿದೆ. ಸೂರ್ಯನು ಮೊದಲು ಭೂಮಿಮೇಲೆ ಜ್ಞಾನವನ್ನು ತಿಳಿಸಿರುವುದು ಭಾರತದೇಶದಲ್ಲಿಯೇ. ಭಾರತದೇಶದಲ್ಲಿ ಪ್ರತ್ಯೇಕಿಸಿ ದಕ್ಷಿಣ ಭಾರತದಲ್ಲಿರುವ ಮನುವಿಗೆ ತೆಲುಗು ಭಾಷೆಯಲ್ಲಿಯೇ ಜ್ಞಾನವನ್ನು ಹೇಳಿರುವುದಾಗಿದೆ. ಆದ್ದರಿಂದ ಎಂದಿಗಾದರೂ ಜ್ಞಾನಕ್ಕೆ ತವರು ಮನೆ ದಕ್ಷಿಣ ಭಾರತದೇಶ. ಹುಟ್ಟಿದ ಭಾಷೆ ತೆಲುಗು ಭಾಷೆಯೆಂದು ಹೇಳಬಹುದು. ಭೂಮಿ ಮೇಲೆ ಜ್ಞಾನವಿಲ್ಲದಂತೆ ಹೋದರೂ, ಧರ್ಮಗಳು ಕಣ್ಮರೆಯಾದರೂ ಭಾರತದೇಶದಲ್ಲಿ ಮಾತ್ರ ಅದೂ ದಕ್ಷಿಣ ಭಾರತದಲ್ಲಿ ಧರ್ಮಗಳಿಗೆ ಕ್ಷಯವಿಲ್ಲ. ದೈವಜ್ಞಾನಕ್ಕೆ ಧಕ್ಕೆ (ಕೊರತೆ) ಇಲ್ಲ ಎಂದು ಹೇಳಬಹುದು. ಸೃಷ್ಟಿ ಆದಿಯಲ್ಲಿ ಭೂಮಿಗೆ ಹತ್ತಿರವಾಗಿರುವ

ಮೇಘಗಳು ಭಾರತದೇಶದಲ್ಲಿ ದಕ್ಷಿಣದಲ್ಲಿರುವ ಪ್ರಾಂತ್ಯದಲ್ಲಿಯೇ ಗುಡುಗು ರೂಪದಲ್ಲಿ ಗುಡುಗುವುದು ನಡೆದಿದೆ. ಸೂರ್ಯನು ದಕ್ಷಿಣ ಭಾರತದೇಶಕ್ಕೆ ಹತ್ತಿರವಾಗಿದ್ದು ಜ್ಞಾನವನ್ನು ಹೇಳಿಹೋಗಿದ್ದಾನೆ. ಆದ್ದರಿಂದ ಪುನಃ ದಕ್ಷಿಣ ಭಾರತದೇಶದಲ್ಲಿರುವ ಮನುವು ಎನ್ನುವ ಮನುಷ್ಯನಿಗೆ ತೆಲುಗು ಭಾಷೆಯಲ್ಲೇ ಜ್ಞಾನವನ್ನು ಹೇಳಿ ಹೋಗುವುದು ನಡೆದಿದೆ. ಈಗ ನಿನ್ನ ಪ್ರಶ್ನೆಗೆ ಉತ್ತರ ಸಿಕ್ಕಿದೆ ಎಂದುಕೊಳ್ಳುತ್ತೇನೆ. ನಿನಗೆ ಇನ್ನೂ ಯಾವುದಾದರೂ ಅನುಮಾನವಿದ್ದರೇ ಕೇಳಬಹುದು.

**ಇಂತಿ**

**ಪ್ರಬೋಧಾನಂದ ಯೋಗೀಶ್ವರರು.**



**ಅಸತ್ಯವನ್ನು ಸಾವಿರ ಜನ ಹೇಳಿದರೂ ಅದು ಸತ್ಯವಲ್ಲ,**
**ಸತ್ಯವನ್ನು ಸಾವಿರ ಜನ ಅಲ್ಲೆಗಳೆದರೂ ಅದು ಅಸತ್ಯವಲ್ಲ.**

Sakshi News pepar, 12-10-2015

# ‘ಹಿಂದೂ ಪದಕ್ಕೆ ನಿರ್ವಚನ ತಿಳಿದಿಲ್ಲ’

ಇಂಡೋರ್ : ರಾಜ್ಯಾಂಗ, ನ್ಯಾಯಪರವಾಗಿ ಹಿಂದೂ ಪದಕ್ಕೆ ನಿರ್ವಚನ ತಿಳಿಯದೆಂದು ಕೇಂದ್ರ ಹೋಂಶಾಖ ತಿಳಿಸಿತು. ಹಿಂದೂ ಪದದ ನಿರ್ವಚನ ಹೇಳಬೇಕೆಂದು ಮಧ್ಯಪ್ರದೇಶ್‌ಗೆ ಸೇರಿದ ಚಂದ್ರ ಶೇಖರ್ ಗೌರ್ ಎಂಬ ವ್ಯಕ್ತಿ ಸಮಾಚಾರ ಹಕ್ಕಿನ ಕಾನೂನಿಗೆ ಮಾಡಿಕೊಂಡ ಪಿಟೀಷನ್‌ಗೆ ಉತ್ತರ ಕೊಡುತ್ತಾ ಹೋಂಶಾಖೆ ಮೇಲಿನ ರೀತಿಯಲ್ಲಿ ಸ್ಪಂದಿಸಿತು. ಆ ಪದಕ್ಕೆ ಸಂಬಂಧಿಸಿದ ಎಂತಹ ಸಮಾಚಾರ ಇಲ್ಲವೆಂದು ಕೇಂದ್ರ ಪೌರ ಸಂಬಂಧ ಗಳ ಶಾಖಾಧಿಕಾರಿ ಗುರತಿಸಿದಂತೆ ಕೇಂದ್ರ ತಿಳಿಸಿತು. ಎಂತಹ ನಿರ್ವಚನ ಇಲ್ಲದಿರುವಾಗ ಇಂತಹ ವರ್ಗದವರು ಹಿಂದೂಗಳೆಂದು ಹೇಗೆ ನಿರ್ಧಾರಿ ಸುತ್ತಿದ್ದೀರೆಂದು, ದೇಶದಲ್ಲಿ ಹಿಂದೂಗಳು ಮೆಜಾರಿಟೀ ಯಾಗಿ ಇದ್ದಾರೆಂದು ಹೇಗೆ ಹೇಳುತ್ತಿದ್ದೀರೆಂದು ಗೌರ್ ಪ್ರಶ್ನಿಸಿದ್ದಾರೆ.

ಮತಗಳು ನಿಷೇಧ, ನಿಷಿದ್ಧ. ಕುಲಗಳು ಅಹೇತುಕ, ಅಶಾಸ್ತ್ರೀಯ.

ಭಗವದ್ಗೀತಾ, ಬೈಬಲ್, ಖುರಾನ್ ಮೂರೂ ಒಂದೇ ದೈವಗ್ರಂಥಗಳಲ್ಲಿನ ಭಾಗಗಳೇ.

ನಿಮ್ಮ ಮನೋಭಾವನೆಗಳು ಕುಲಮತಗಳಿಗೆ ಅತೀತವಾದರೇ ಕೂಡಲೇ "ಪ್ರಬೋಧ ಸೇವಾಸಮಿತಿ" ಯಲ್ಲಿ ಸದಸ್ಯರಾಗಿ ಸೇರಿರಿ. ದೇವರು ನಿಮ್ಮನ್ನು ಜ್ಞಾನಿಗಳಾಗಿ ಮಾಡಬೇಕೆಂದು ಕೋರುತ್ತಿರುವ

——ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು

**Cell:09705864675, 09440556968, 09611133635**

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಇಂದೂ ಜ್ಞಾನವೇದಿಕೆ




**ಇಂದೂ ಜ್ಞಾನವೇದಿಕೆ (I.G.V)**

**(Regd.No.: 168/2004)**

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@thraithashakam.org

www. thraithashakam.org

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ದ್ರಾವಿಡ ಶ್ರೇಷ್ಠಿ ಸಂಘ




**ದ್ರಾವಿಡ ಶ್ರೇಷ್ಠಿ ಸಂಘ** (D.S.S)

**(Regd.No.: /2015)**

ಕೃಷ್ಣಾ ನಗರ್ ಕಾಲನೀ, ಕೊತ್ತಕೋಟ(ಮಂ),

ಮಹಬೂಬ್‌ನಗರ್ (ಜಿಲ್ಲಾ), ತೆಲಂಗಾಣ–509381

e-mail id : info@dravidashreshtisangham.org

***www.dravidashreshtisangham.org***

# ಒಂದು ಮಾತು
# ಮೂರು ಗ್ರಂಥಗಳು



Author :

**The Only GURU of Three Religions**

**The Spiritual Emperor, Thraitha Theorem Originator**

**Sri Acharya Prabodhananda Yogeeshwarulu**

**www.thraithashakam.org**